ಸಂಪುಟ 10
ಸಂಚಿಕೆ 15-18
ಆಗಸ್ಟ್-ಸೆಪ್ಟೆಂಬರ್ 1986
ಬೆಲೆ 1 ರೂ.

# ಪಂಚಮ

## ಅಕ್ಷರಗಳ ಬೆಳಕಿನತ್ತ ಸಹಸ್ರ ಕಾಲುಗಳ ಮೆರವಣಿಗೆ



**ಆಗಸ್ಟ್ 15**

ಗುಂಡು ಭೇದಿಸದ ಗಾಜಿನ ಕವಚಗಳ ಹಿಂದೆ ಪ್ರಧಾನಿ ರಾಜೀವ್‌ಗಾಂಧಿ ದಿಲ್ಲಿಯ ಕೆಂಪುಕೋಟೆಯ ಮೇಲೆ ತ್ರಿವರ್ಣ ಧ್ವಜ ಹಾರಿಸುತ್ತಿರುವಾಗ; ದೇಶದ ತುಂಬೆಲ್ಲಾ ಅರೆ ಕನಸು ಅರೆ ಮನಸ್ಸಿನ ಒಡೆದ ಹೃದಯಗಳು ಸ್ವಾತಂತ್ರ್ಯ ದಿನಾಚರಣೆಯ ರೂಢಿಗೆ ಕಣ್ಬಿಡುತ್ತಿರುವಾಗ; ಗುಂಡಿನ ಮಳೆಗರೆದ ಹಾದಿಯಲ್ಲಿ ಕಣ್ಣುತುಂಬಾ ಕನಸು. ಎದೆತುಂಬ ಭರವಸೆಯಹೊತ್ತ ಕತ್ತಲ ಪಯಣಿಗರಾದ ದಲಿತರ ಸಹಸ್ರ ಸಹಸ್ರ ಕಾಲುಗಳು ರಾಜ್ಯದಾದ್ಯಂತ ಅಕ್ಷರಗಳ ಬೆಳಕಿಗೆ ಹಂಬಲಿಸಿ ಮೆರವಣಿಗೆ ನಡೆಸಿದವು.

ದಲಿತರ ಜೋಪಡಿಗಳ ಕತ್ತಲಿಗೆ ಅಕ್ಷರಗಳ ಬೆಳಕು ಸೂಡಲು ಹೋಬಳಿಗೊಂದು ವಸತಿಶಾಲೆ ತೆರೆಯುವಂತೆ ಸರ್ಕಾರವನ್ನು ಒತ್ತಾಯಿಸಲು ದ.ಸಂ.ಸ ಈ ಮೌನ ಮೆರವಣಿಗೆಗೆಕರೆಕೊಟ್ಟಿತ್ತು. ಈ ಕರೆಗೆ ಓಗೊಟ್ಟು ನಾಡಿನಾದ್ಯಂತ ದ.ಸಂ.ಸ. ಶಾಖೆಗಳು ಈ ಕಾರ್ಯಕ್ರಮವನ್ನು ಅಭೂತಪೂರ್ವವಾಗಿ ಯಶಸ್ವಿಗೊಳಿಸಿದ ಸಂತಸದ ಸುದ್ದಿ ಬಂದಿದೆ.

ರಾಯಚೂರಿನ ಆ ಕೊನೆಯಿಂದ, ಕರಾವಳಿಯ ತೆಕ್ಕೆಯ ದಕ್ಷಿಣ ಕನ್ನಡ, ಮೂಡಣದ ಮನೆಯಾದ ಕೋಲಾರ ಜಿಲ್ಲೆ... ಹೀಗೆ ನಾಡಿನಾದ್ಯಂತ ಅಂದು ಸಹಸ್ರ ಸಹಸ್ರ ಕಾಲುಗಳು ಬೆಳಕಿನ ಅಕ್ಷರಗಳಿಗಾಗಿ ಹಂಬಲಿಸಿ ಹೆಜ್ಜೆಗಳ ಮುನ್ನುಡಿಯ ಬರವಣಿಗೆ ಬರೆದವು. ಕೆಲವು ಕಡೆ ಮೌನ ಮೆರವಣಿಗೆಯಲ್ಲಿ ಕಪ್ಪುಬಾವುಟಗಳು ಕಾಣಿಸಿಕೊಂಡ ವರದಿಗಳೂ ಇವೆ.

**ರಾಯಚೂರು:**

ಮೆದಕಿನ್ಹಾಳ, ಮಹಮ್ಮದ್‌ನಗರಗಳ ಹೋರಾಟದ ನಡುವೆಯೂ 600 ಜನ ದ.ಸಂ.ಸ. ಸದಸ್ಯರು ಅಂಬೇಡ್ಕರ್

(3ನೇ ಪುಟಕ್ಕೆ)

# ಪತ್ರಗಳು

## ನಾನು ಜೀತಕ್ಕೆ ಹೋಗಬೇಕೆ ?

ಪ್ರಿಯ ಸಂಪಾದಕರೇ,

ನಾನು ಅಂತಿಮ ವರ್ಷದ ವೈದ್ಯಕೀಯ ಪದವಿಯಲ್ಲಿ ಓದುತ್ತಿರುವ ಪರಿಶಿಷ್ಟ ಜಾತಿಗೆ ಸೇರಿದ ವಿದ್ಯಾರ್ಥಿ. ನಾನು ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗ, ಗುಡಿಸಲಿನಲ್ಲಿದ್ದುಕೊಂಡು ಅರೆಹೊಟ್ಟೆಯಲ್ಲಿರುತ್ತಿದ್ದ ತಂದೆ ತಾಯಿಗಳಿಗೆ ಎಲ್ಲಿ ಭಾರವಾಗಿಬಿಡುತ್ತೇನೋ ಎನ್ನುವ ಕಾರಣದಿಂದ ಹಾಸ್ಟೆಲು ಬಿಟ್ಟು ಬಡಪಟ್ಟಿಗೆ ಊರಿಗೆ ಹೋಗುತ್ತಿರಲಿಲ್ಲ. ಕೂಲಿಮಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ ನನ್ನ ತಂದೆತಾಯಿಗಳ ಊಟಕ್ಕೆ ನಾನು ಭಾಗಿಯಾಗುವುದು ನನಗೆ ಬೇಕಿರಲಿಲ್ಲ. ಅಷ್ಟೊಂದು ಹಸಿವು, ದಾರಿದ್ರ್ಯದ ಕುಟುಂಬ ನನ್ನದು.

ಆರನೇ ತರಗತಿಯಿಂದ ಹತ್ತನೇ ತರಗತಿಯವರೆಗೂ ದಸರಾ, ಬೇಸಿಗೆಯಂತಹ ರಜಾದಿನಗಳಲ್ಲಿ ಹಳ್ಳಿಯಲ್ಲೇ ಇದ್ದು ನಾನೂ ಕೂಲಿಮಾಡುತ್ತಿದ್ದೆ. ಹತ್ತು ಪಾಸಾಗಿ, ಹಳ್ಳಿಯಲ್ಲಿ ಅವರಿವರ ಬಾಯಲ್ಲಿ "ಹೇಗೋ ಕನಿಷ್ಠ ಮೂರು ನೂರು ರೂ.ಗಳ ಸರ್ಕಾರಿ ಸಂಬಳ ಪಡೆಯುವಷ್ಟವನಾಗಿಬಿಟ್ಟ" ಇತ್ಯಾದಿ ಮಾತುಗಳು ಬರುವುದನ್ನು ಕೇಳಿ ನನ್ನ ಆ ಓದಿಲ್ಲದ ಅಕ್ಕ ನೀನಿನ್ನು "ಕೂಲಿಗೋಗಬೇಡ, ಕಾಲೇಜು ಓದುವವನು" ಎಂದಳು. ಆಗ ನಾನು ಕೂಲಿಮಾಡುವುದು ಅಷ್ಟಕ್ಕೆ ನಿಂತಿತು.

ಈಗ ಹೇಳಬೇಕೆಂದಿರುವ ವಿಷಯಕ್ಕೆ ಬರುವೆ. ಆರನೇ ತರಗತಿಯಿಂದ ಅಂತಿಮ ವರ್ಷದ ವೈದ್ಯಕೀಯ ಪದವಿ ತರಗತಿಯವರೆಗೆ ಸುಮಾರು ಹತ್ತುವರುಷಗಳನ್ನು ಹಾಸ್ಟೆಲ್ ಜೀವನದಲ್ಲಿ ಕಳೆದಿರುವೆ. ಈ ಹತ್ತು ವರುಷಗಳ ಅವಧಿಯಲ್ಲಿ ನಾನು ಆರು ವಿದ್ಯಾರ್ಥಿನಿಲಯಗಳಲ್ಲಿ ವಾಸವಾಗಿದ್ದೆ. ಆ ವಿದ್ಯಾರ್ಥಿನಿಲಯಗಳೆಲ್ಲದರಲ್ಲೂ ಕಕ್ಕಸ್ಸು ಕ್ಲೀನರ್‌ಗಳಾಗಿ ಕೆಲಸ ಮಾಡುತ್ತಿದ್ದವರು ಪರಿಶಿಷ್ಟ ಜಾತಿಯವರೇ ಆಗಿದ್ದರು. ಈ ಬಗ್ಗೆ ಓದಿಕೊಂಡು ಮುಂದುವರಿದ ನನಗೆ ಒಮ್ಮೆ ಯೋಚಿಸಬೇಕೆನಿಸುತ್ತದೆ.

ಕೆಲದಿನಗಳ ಹಿಂದೆ ದಲಿತರಾದ ಸಚಿವ ಬಸವಣ್ಣೆಪ್ಪನವರು ಕುಲಕಸುಬನ್ನು ಮುಂದುವರೆಸಲು ಕರೆ ಕೊಟ್ಟರು. ಈ ಹೇಳಿಕೆ ನಾನು ಕಣ್ಣಾರೆ ಕಂಡಿದ್ದ ಕಕ್ಕಸ್ಸು ಕ್ಲೀನ್ ಮಾಡುವ ನನ್ನ ಜನರ ಕಸುಬಿಗೆ ಬಿಡುಗಡೆಯೇ ಇಲ್ಲವೇ ಎನ್ನುವ ನನ್ನ ವ್ಯಥೆಗೆ 'ಇಲ್ಲ' ಎಂದು ಸಾರಿಹೇಳುವಂತಿತ್ತು. ಮಾನ್ಯ ಮಂತ್ರಿಯವರ ಮಾತಿನಂತೆ ನಾನೂ ಕಾಲೇಜಿಗೆ ಮಣ್ಣಾಕಿ ನಮ್ಮಳ್ಳಿಯ ಸಾಹುಕಾರರ ಹಟ್ಟಿಗೆ ಕೂಲಿಗೋ, ಜೀತಕ್ಕೋ ಹೊರಡಬೇಕಿತ್ತು.

ಪುರೋಹಿತಶಾಹಿಗಳು, ಸಂಪ್ರದಾಯವಾದಿಗಳಾದಂತವರು ಹೇಳುವಂತಿದ್ದ ಮಾತು ದಲಿತ ಮಂತ್ರಿಯೊಬ್ಬರ ಬಾಯಲ್ಲಿ ಬಂದಿತ್ತು. ಬಹುಶಃ ತಮ್ಮ ರಾಜಕೀಯ ದಣಿಯ ವಕ್ತಾರರಾಗಿ ಅವರು ಈ ಮಾತನ್ನು ಆಡಿರಬೇಕು. ಇದು ಈ ದೇಶದ ದಲಿತ ಮಂತ್ರಿ ಶಾಸಕರ 'ರಾಜಕೀಯ ಜೀತ'ವಲ್ಲದೆ ಮತ್ತೇನು ?

ಇಂತಹವರ ಮಧ್ಯೆಯೂ ನಾವು ಕಾಣಬಹುದಾದ ಕೆಲವು ಕುಸುಮಗಳು ಇರುವುದೊಂದೇ ನಮಗೆ ನೆಮ್ಮದಿ ಅಂತವರಲ್ಲಿ ಒಬ್ಬರಾದ ಜಾರ್ಜ್‌ಫರ್ನಾಂಡಿಸ್ ನೆನಪಿಗೆ ಬರುತ್ತಾರೆ. ಈಗ್ಗೆ ಐದಾರು ವರುಷಗಳ ಹಿಂದೆ ಕೇರಳದಲ್ಲೋ, ತಮಿಳುನಾಡಿನಲ್ಲೋ ಬ್ರಾಹ್ಮಣರಿಗಾಗಿಯೇ "ಬ್ರಾಹ್ಮಣವಿಶ್ವವಿದ್ಯಾಲಯ" ಸ್ಥಾಪಿಸುವ ಸುದ್ದಿ ಬಂದಾಗ ಪ್ರತಿಕ್ರಿಯಿಸುತ್ತಾ ಜಾರ್ಜ್ ಹೇಳಿದ್ದರು "ಹಾಗೇ ಆಗಲಿ, ಆದರೆ ಅಲ್ಲಿ ಕಕ್ಕಸ್ಸು ಕ್ಲೀನರ್‌ಗಳು, ಸ್ವೀಪರ್‌ಗಳೂ ಬ್ರಾಹ್ಮಣರೇ ಆಗಿರಲಿ" ಎಂದಿದ್ದರು. ವ್ಯಂಗ್ಯ ಮತ್ತು ಪ್ರತಿಭಟನೆ ತುಂಬಿದ ಈ ಮಾತು ಯಾಕೋ ಏನೋ ನನಗೆ ತುಂಬಾ ಆತ್ಮೀಯವಾಗಿಬಿಡುತ್ತದೆ. ಬಹುಶಃ ಅನುಭವದಿಂದಾಗಿ ನೋವು ಸಿಟ್ಟಾಗಿ ಪರಿವರ್ತನೆಯಾಗಿರಬೇಕಲ್ಲವೇ ?

● ಮುನಿಸು

---

# ದಲಿತರ ಗೋರಿಯ ಮೇಲೆ ಕೆಂಪು ಗುಲಾಬಿ

ಶಂಕರ್ ಮೂವಳ್ಳಿ

ಆಗಸ್ಟ್ 9ರ ಸಂಜೆ ನಾನು ಮತ್ತು ಜಿಗಣಿ ಶಂಕರ್ ಟೌನ್‌ಹಾಲ್ ಎದುರು ಹಾದು ಹೋಗುತ್ತಿದ್ದೆವು. ಪುರಭವನದ ಮುಂಭಾಗದಲ್ಲಿ ಕಮ್ಯೂನಿಷ್ಟರ ಕೆಂಬಾವುಟದ ಕುಡುಗೋಲು ಸುತ್ತಿಗೆ, ಕುಡುಗೋಲು ತೆನೆ, ಹಾಗೂ ಭಾರತೀಯ ಮಜ್ದೂರ್ ಸಭಾದವರ ಕೇಸರಿ ಬಣ್ಣದ ನೇಗಿಲು ಮತ್ತು ಚಕ್ರ ಒಂದಕ್ಕೊಂದು ಯದ್ವಾತದ್ವಾ ಹಾರಾಡುತ್ತಿದ್ದವು. ತಮ್ಮ ನಾಯಕರುಗಳ ಆರ್ಭಟದಂತೆ! ಕುತೂಹಲಗೊಂಡು ನಾವು ಒಳಗೆ ಹೋಗಿ ಕುಳಿತೆವು. ವೇದಿಕೆಯ ಮೇಲೆ ಅನೇಕ ಕಾರ್ಮಿಕ ನಾಯಕರು ಪವಡಿಸಿದ್ದರು. ಹಿಂಭಾಗದಲ್ಲಿ ದೊಡ್ಡ ಬ್ಯಾನರ್‌ನಲ್ಲಿ "ಜಾತೀಯತೆ ಮತ್ತು ವಿಚ್ಛಿದ್ರಕಾರಿ" ಶಕ್ತಿಗಳು ಎಂದು ಬರೆದಿದ್ದು ಕಂಡು ಬಂತು.

ಅಧ್ಯಕ್ಷತೆ ವಹಿಸಿದ್ದವರು "ದೇಶದ ಆಂತರಿಕ ಭದ್ರತೆಗೆ ಧಕ್ಕೆ" ಬಂದಿರುವುದರ ಬಗ್ಗೆ ಹೆಚ್ಚು ಖತಿಗೊಂಡಿರುವುದನ್ನು ತಮ್ಮ ಪೀಠಿಕೆಯಲ್ಲಿ ಹೇಳಿ ಭಾಷಣಕಾರರಿಗೆ ಅವಕಾಶ ಮಾಡಿ ಕೊಟ್ಟರು.

ಮೊದಲು ಮಾತನಾಡಿದ "ಭಾರತೀಯ ಮಜ್ದೂರ್ ಸಂಘ"ದ ನಾಯಕರೊಬ್ಬರು "ಹಿಂದೂಸ್ಥಾನದ ಗುತ್ತಿಗೆದಾರರಂತೆ" ದೇಶದಲ್ಲಿ ತಲೆದೋರಿರುವ ಈ ಸಮಸ್ಯೆ ಬಗ್ಗೆ ತಮ್ಮ ಒಳಮನಸ್ಸಿನಲ್ಲಿ ಹುದುಗಿರುವ ಮತೀಯ ವಿಷವನ್ನು, ಇದು ಭಾಷಾ ಅಲ್ಪಸಂಖ್ಯಾತರಿಂದ ಆಗುತ್ತಿರುವ ತೊಂದರೆ ಎಂಬರ್ಥದಲ್ಲಿ ಮಾತನಾಡತೊಡಗಿದ್ದರು. ಆಗ ನಮ್ಮ ಮನಸ್ಸಿನಲ್ಲಿ ಕಳೆದ ವರ್ಷ "ಭಿವಂಡಿಯಲ್ಲಿ ನಡೆದ ಕೋಮು ಗಲಭೆ"ಯಲ್ಲಿ ಅನೇಕ ಮುಗ್ಧ ಜನರ ಹತ್ಯೆ, ಹದಿಹರೆಯದ ಹೆಣ್ಣುಗಳ ಮಾನಭಂಗ ನಡೆಯುವಾಗ ಈ ಸಂಘ ತಳೆದ ಧೋರಣೆ ಕಣ್ಣ ಮುಂದಿನ ದೃಶ್ಯದಂತೆ ಇತ್ತು.

ತದನಂತರ ಸಿ. ಐ. ಟಿ.ಯು ಕಾರ್ಮಿಕ ಸಂಘದ ಪರವಾಗಿ ಮಾತನಾಡಿದ ಶ್ರೀಮಾನ್ ಸೂರ್ಯನಾರಾಯಣ ರಾವ್‌ರವರು ತಮ್ಮ ಪಕ್ಷದಿಂದಲೇ ದೇಶದಲ್ಲಿ ಕ್ರಾಂತಿ ಸಾಧ್ಯ ಎನ್ನುವಂತೆ ಗತ್ತಿನಿಂದ ಮಾತನ್ನಾರಂಭಿಸಿ ಕಡೆಗೆ ತಮ್ಮ ಹೃದಯದಲ್ಲಿ ಮಡುಗಟ್ಟಿದ ಸಿಟ್ಟು, ಆಕ್ರೋಶಗಳನ್ನು ಒಂದೇ ಬಾರಿಗೆ ಮೈಕ್‌ನ ಗಂಟಲು ಹರಿದು ಹೋಗುವಂತೆ "ಇಲ್ಲಿ ದಲಿತ ಸಂಘರ್ಷ ಸಮಿತಿ ಅನ್ನೋ ಒಂದು ಸಂಘ ಐತೆ. ಇದು ಕೆಳಜಾತಿಗಳಲ್ಲಿ ಇರೋ ಬಡವರ್ನ, ಮೇಲ್ವರ್ಗದವರ ಮೇಲೆ ಎತ್ತಿ ಕಟ್ಟೋ ಕೆಲ್ಸ ಮಾಡ್ತಾ ಇದೆ. ಇಂಥಾ ಜಾತೀವಾದಿ ಸಂಘಕ್ಕೆ

ಬೆಂಗಳೂರು:

## ಕಂಡದ್ದು ಕಂಡಂತೆ...

ನೀವ್ಯಾರು ಪ್ರೋತ್ಸಾಹ ಕೊಡಬಾರ್ದು" ಎಂದು ಹಳ್ಳಿಗಾಡಿನ ದಲಿತನೊಬ್ಬನಿಗೆ ಸವರ್ಣೀಯ ಜಮೀನ್ದಾರನೊಬ್ಬ ಮಾತನಾಡುವ ವರಸೆಯಲ್ಲಿ ಹೇಳಿ ಮುಗಿಸಿದರು.

ಕುಳಿತಿದ್ದ ನಮಗೆ ಮೈಯಲ್ಲಿ ಬೆವರಿಳಿಯತೊಡಗಿತ್ತು. ತಕ್ಷಣ ಮೂರು ಪ್ರಶ್ನೆಗಳನ್ನು ಚೀಟಿಯಲ್ಲಿ ಬರೆದು ವೇದಿಕೆಯ ಹಿಂಭಾಗಕ್ಕೆ ಹೋಗಿ ಅಧ್ಯಕ್ಷರಿಗೆ ಕೊಟ್ಟು ಬಂದೆವು.

1) ಈ ದೇಶದ ಜಾತಿವ್ಯವಸ್ಥೆಯ ಬಗ್ಗೆ ಕಮ್ಯೂನಿಷ್ಟರು ತಳೆದಿರುವ ಕುರುಡು ಧೋರಣೆಗೆ ಕಾರಣವೇನು?

2) ಈ ದೇಶದ ಅಪಮಾನಿತರನ್ನು ದ. ಸಂ. ಸ. ಬಿಟ್ಟರೆ ಮತ್ಯಾವ ಎಡಪಂಥೀಯ ಸಂಘಟನೆಗಳು ಮುಟ್ಟಿವೆ?

3) ಈ ದೇಶದಲ್ಲಿ ಯಾವ ಪಕ್ಷಗಳು ದಲಿತರಿಗೆ ನಾಯಕತ್ವವನ್ನು ಬಿಟ್ಟುಕೊಟ್ಟಿವೆ?

ಈ ಮೂರು ಪ್ರಶ್ನೆಗಳನ್ನು ಓದಿದ ಸೂರಿ ಉತ್ತರಿಸುವ ಬದಲು ಅದನ್ನು ಹರಿದುಹಾಕಿದರು. ಬಹುಶಃ ಬ್ರಾಹ್ಮಣ ಮೆದುಳಿನ ಸೂರಿಗೆ ಕೆಳಜಾತಿಗಳು ಈ ದೇಶದ ನಾಯಕತ್ವ ವಹಿಸುವುದು ಸಹಿಸಲಾಗದ ಸಂಕಟ ಉಂಟುಮಾಡುವಂತಿತ್ತು ಆ ನೋಟ.

(13ನೇ ಪುಟಕ್ಕೆ)

# ಅಕ್ಷರಗಳ ಬೆಳಕಿನತ್ತ....

(1ನೇ ಪುಟದಿಂದ)

ಹಾಸ್ಟೆಲಿನಿಂದ ಹೊರಟು ಬಿಸಿಲು ಉಗುಳುವ ಬಂಡೆಗಳ, ಕೋಟೆಗಳ ರಾಯಚೂರು ಪಟ್ಟಣದ ಪ್ರಮುಖ ಬೀದಿಗಳಲ್ಲಿ ಮೌನಮೆರವಣಿಗೆ ನಡೆಸಿದರು. ಮನವಿಪತ್ರ ಸಲ್ಲಿಸಲು ಹೋದಾಗ ಅಲ್ಲಿ ಜಿಲ್ಲಾಧಿಕಾರಿ ಎಲ್. ಬಿ. ಮನ್ನಿಕಟ್ಟಿ ನಾಪತ್ತೆ. ಎರಡು ಗಂಟೆಗಳ ಕಾಲ ಕಾದ ಮೆರವಣಿಗೆಕಾರರು ತುಂಬಾ ನಿರಾಶೆಯಿಂದ ಹಿಂತಿರುಗಿದರು. ದಲಿತರು ಮೌನಮೆರವಣಿಗೆ ನಡೆಸಿ ಮನವಿ ಸಲ್ಲಿಸಲು ಬರುವ ಸುದ್ದಿ ಗೊತ್ತಿದ್ದ ಜಿಲ್ಲಾಧಿಕಾರಿಗಳು ನಾಪತ್ತೆ ನಾಟಕವಾಡಿದ್ದು ದಲಿತರನ್ನು ಸಿಟ್ಟಿಗೆಬ್ಬಿಸಿತ್ತು.

**ದಕ್ಷಿಣ ಕನ್ನಡ:**

ಕಡಲ ಅಲೆಗಳ ನಿರಂತರ ನಿನಾದ, ಮನಮೋಹಕ ಅಡಿಕೆ, ತೆಂಗುಗಳ ಚಿತ್ತಾರ, ತಂಗಾಳಿಗೆ ತಲೆದೂಗುವ ಬತ್ತದ ಹಾಲು ತೆನೆಗಳ ದಕ್ಷಿಣ ಕನ್ನಡ ತನ್ನ ಅಂತರಂಗದ ಮೂಲೆಯಲ್ಲಿ ಘನರುತ್ಥಾನ, ಕಂದಾಚಾರಗಳ ತುಂಬುತ್ತಿರುವ ವಿಷದ ಬಟ್ಟಲನ್ನು ಬಚ್ಚಿಟ್ಟುಕೊಂಡ ಜಿಲ್ಲೆ. ಈ ಹಾಲಾಹಲದ ಹಾದಿ ಬಿಟ್ಟು ಒಸರುವ ಹಾಲು ಕನಸಿನ ಹಾದಿ ಹಿಡಿದ ದಕ್ಷಿಣ ಕನ್ನಡದ ದಲಿತರು ಮಂಗಳೂರಿನ ಬಾವುಟಗುಡ್ಡದಿಂದ ಮೌನ ಮೆರವಣಿಗೆಯಲ್ಲಿ ಹೊರಟು ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿದರು. ಅಕ್ಷರಗಳ 'ಅಹಂ' ನಡುವೆಯೂ ಅಕ್ಷರ ಕಾಣದ ದಲಿತರು ಅಕ್ಷರಗಳ ಬೆಳಕಿಗಾಗಿ ಸರ್ಕಾರವನ್ನು ಒತ್ತಾಯಿಸಿದರು.

**ಹಾಸನ:**

ಊಳಿಗಮಾನ್ಯ ರಾಜಕಾರಣದ ಕೋಟೆಗೆ ಮುಖ್ಯ ಹೆಬ್ಬಾಗಿಲುಗಳಲ್ಲಿ ಒಂದಾದ, ದಲಿತರ ಬೆವರಿನಿಂದ ನಳನಳಿಸುವ ಭತ್ತ. ಕಾಫಿ. ಅಡಿಕೆಗಳ ಅರೆಬರೆ ಸಮೃದ್ಧಿ, ಜತೆಜತೆಗೆ ಬಯಲು ಸೀಮೆಯ ದಲಿತರ ನೋವು, ಕಣ್ಣೀರುಗಳ ಆಗರವೂ ಆಗಿರುವ ಹಾಸನದಲ್ಲಿ 500 ಜನ ದಲಿತರು ಮೌನ ಮೆರವಣಿಗೆ ನಡೆಸಿದರು.

ಹಳ್ಳಿಗಾಡುಗಳಿಂದ ಬೆಳಕಿನ ಬೆನ್ನತ್ತಿ ಬಂದಿದ್ದ ದಲಿತರು ನಗರದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ನಡೆಸಿ ಹಳೆ ಬಸ್‌ನಿಲ್ದಾಣದಲ್ಲಿ ಬಹಿರಂಗ ಸಭೆ ನಡೆಸಿದರು. ಸಭೆಯ ಅಧ್ಯಕ್ಷತೆಯನ್ನು ಹೆಚ್.ಕೆ. ಕರಿಯಯ್ಯ ವಹಿಸಿದ್ದು ಚಂದ್ರಪ್ರಸಾದತ್ಯಾಗಿ, ಗೋಪಾಲ್ ಮುಂತಾದವರು ಮಾತನಾಡಿದರು.

**ಚಿಕ್ಕಮಗಳೂರು:**

ಕಾಫಿಯ ಸಿರಿ, ಆ ಸಿರಿಯ ಸೆರೆಯಾಳಾಗಿಸಿಕೊಂಡ ಶ್ರೀಮಂತ ಕಾಫಿ ದೊರೆಗಳ ಅಟ್ಟಹಾಸ ಮಲೆನಾಡಿನ ಚೆಲುವು ಇತ್ಯಾದಿಗಳ ಅಡುಂಬೊಲವಾದ ಚಿಕ್ಕಮಗಳೂರಿನಲ್ಲಿ ದಲಿತರು ನಡೆದಾಡುವ ಮೋಡಗಳನ್ನು ಹಿಂದಿಟ್ಟುಕೊಂಡು ಮೌನಮೆರವಣಿಗೆ ನಡೆಸಿದರು.

ನಗರದ ಪ್ರಮುಖ ಬೀದಿಗಳಲ್ಲಿ ಮೌನಮೆರವಣಿಗೆ ನಡೆಸಿ ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿದರು. ನಂತರ ನಗರಸಭೆ ಆವರಣದಲ್ಲಿ ಸಭೆ ನಡೆಯಿತು. ಸಭೆಯಲ್ಲಿ ವಕೀಲ ಧ್ರುವನಾರಾಯಣ್, ಪತ್ರಕರ್ತ ಶಂಕರ ಲಾಳಾಪುರ ಮುಂತಾದವರು ಮಾತನಾಡಿದರು.

**ಚಿತ್ರದುರ್ಗ:**

ಮಠ, ಮಾನ್ಯಗಳ ಕೋಟೆಯೊಳಗೆ ಬೇರು ಬಿಟ್ಟ ಪರ ಕಣ್ಣು ಕೆಂಪಾಗುವಂತೆ ಬೆಳೆಯುತ್ತಿರುವ ದ.ಸಂ.ಸ. ತನ್ನ 15ರ ಕಾರ್ಯಕ್ರಮದಿಂದ ಪೊಲೀಸರು, ರಾಜಕಾರಣಿಗಳ ಕಣ್ಣೂ ಕೆಂಪಾಗುವಂತೆ ಮಾಡಿತು.

ಕಪ್ಪುಬಾವುಟ ಹೊತ್ತು ಮೌನಮೆರವಣಿಗೆಗೆ ರೆಡಿಮಾಡಿಕೊಳ್ಳಲು ಮೈದಾನಕ್ಕಿಳಿದ ದ.ಸಂ.ಸ. ಸದಸ್ಯರ ಮೊದಲ ತಂಡವನ್ನು ಪೊಲೀಸರು ಬಂಧಿಸಿದರು ಈ ತಂಡದಲ್ಲಿ 150 ಜನರಿದ್ದರು. ಜಯಣ್ಣ ಇದರ ನೇತೃತ್ವ ವಹಿಸಿದ್ದರು.

ಆ ನಂತರ ತಂಡತಂಡವಾಗಿ ಐದು ತಂಡಗಳನ್ನು ಬಂಧಿಸಿದರು. ಡಿ. ಮುರುಗೇಶರ ನೇತೃತ್ವದ ಕೊನೆಯ ತಂಡ ಬಂಧನವಾದಾಗ ಮಧ್ಯಾಹ್ನ ಮೀರಿ ಹೋಗಿತ್ತು. ಮೊದಲ ಮತ್ತು ಎರಡನೆಯ ತಂಡಗಳನ್ನು ಐಮಂಗಲ ಸಾಣೆಕೆರೆಗಳಿಗೆ ಒಯ್ಯಲಾಯಿತು. ಈ ಮುನ್ನೆಚ್ಚರಿಕೆ, ಪೊಲೀಸರ ಈ ಮಿತಿಮೀರಿದ ಶಿಸ್ತಿಗೆ ಕಾರಣ ಸಚಿವ ಮಂಜುನಾಥ್ ಚಿತ್ರದುರ್ಗದಲ್ಲಿ ಮೊಕ್ಕಾಂ ಹೂಡಿದ್ದದ್ದು. ಅವರು ನಗರದಿಂದ ತೆರಳಿದ ನಂತರ ಬಂಧಿತರನ್ನು ಬಿಡುಗಡೆ ಮಾಡಲಾಯಿತು.

ಸ್ವಾತಂತ್ರ್ಯದ ಬಾವುಟಗಳು ಹಾರಾಡುತ್ತಿರುವಾಗ, ಪಾರಿವಾಳಗಳು ಹೂ ಪಕಳೆಗಳು ಚೆಲ್ಲಾಡುತ್ತಿರುವಾಗ ಬೆಳಕಿಗೆ ಹಂಬಲಿಸಿದ ದ.ಸಂ.ಸ. ಮೆರವಣಿಗೆಗಾರರ ಒಂದು ತುಕಡಿಯನ್ನು ಚಿತ್ರದುರ್ಗದ ಪೊಲೀಸು ಠಾಣೆಯ ಲಾಕಪ್ಪಿನ ಕತ್ತಲಲ್ಲಿ ಕೂಡಿಸಲಾಗಿತ್ತು. ಇಡೀ ದೇಶವೇ ಸ್ವಾತಂತ್ರ್ಯದ ಒಣ ಆಡಂಬರದಲ್ಲಿ ತೇಲುತ್ತಿರುವಾಗ ಅವರು ಸರಳುಗಳ ಹಿಂದೆ ಕೈದಿಗಳಂತೆ ಬಂಧಿತರಾಗಿದ್ದರು!

ಹೊಸದುರ್ಗ, ದಾವಣಗೆರೆ, ಚಳ್ಳಕೆರೆ, ಹರಿಹರ ಮುಂತಾದ ತಾಲೂಕು ಕೇಂದ್ರಗಳಲ್ಲೂ ಮೌನ ಮೆರವಣಿಗೆ ನದೆಯಿತು. ಹರಿಹರ ತಾಲೂಕಿನ ಬೆಳ್ಳೂಡಿ ಗ್ರಾಮದ ದಲಿತರು ಕಪ್ಪುಬಾವುಟ ಹಾರಿಸಿದ್ದಕ್ಕೆ ಪೊಲೀಸರಿಂದ ಬಂಧನಕ್ಕೊಳಗಾಗಿದ್ದರು.

**ಮೈಸೂರು:**

ದಲಿತರ 'ರೆಡ್‌ಸ್ಕ್ವೇರ್' ಎಂದು ಹೆಸರಾದ ಅಶೋಕಪುರಂ ಅಂಬೇಡ್ಕರ್ ಉದ್ಯಾನವನದಿಂದ ಸಾವಿರಕ್ಕೂ ಹೆಚ್ಚು ನೆರೆದಿದ್ದ ದಲಿತರು ನಗರದ ಪ್ರಮುಖ ಬೀದಿಗಳಲ್ಲಿ ಮೌನ ಮೆರವಣಿಗೆ ನಡೆಸಿದರು. ಮೆರವಣಿಗೆಯಲ್ಲಿ ಬಾವುಟ, ಭಿತ್ತಿಚಿತ್ರಗಳು ಎದ್ದು ಕಾಣುತ್ತಿದ್ದವು.

ನಂತರ ಪುರಭವನದಲ್ಲಿ ನಡೆದ ಸಭೆಯನ್ನು ಉದ್ದೇಶಿಸಿ ಖ್ಯಾತ ಸಾಹಿತಿ ಚದುರಂಗ, ರಾಮದಾಸ್ ಸಮತಾ ವೇದಿಕೆಯ ಸೂಸಾನ್ ಡೇನಿಯಲ್ ಮಾತನಾಡಿದರು.

ರಾಜ್ಯದ ಮೂತಣಮನೆ ಎಂದು ಹೆಸರಾದ ಕೋಲಾರ ಬರಗಾಲ, ಭೂಮಾಲಿಕರ ಕುತಂತ್ರ, ಕ್ರೌರ್ಯಗಳ ಮಸಣದ ಮನೆ ಎಂದೇ ಖ್ಯಾತಿಪಡೆದಿದೆ. ಸೂರ್ಯನನ್ನು ಮೊಟ್ಟಮೊದಲು ಸ್ವಾಗತಿಸುವ ಸ್ಥಾನದಲ್ಲಿದ್ದರೂ ಇಲ್ಲಿ ಸದಾ ಅರ್ಧರಾತ್ರಿಯ ರೌದ್ರವತೆ.

ಇಂಥ ಅರ್ಧರಾತ್ರಿ ವಾತಾವರಣದಲ್ಲಿ 500ಕ್ಕೂ ಮೇಲ್ಪಟ್ಟ ದಲಿತರು ಕಪ್ಪುಬಾವುಟಗಳೊಂದಿಗೆ ಮೌನಮೆರವಣಿಗೆ ನಡೆಸಿದರು. ಅಕ್ಷರಗಳ ಬೆಳಕಿಗೆ ಹಂಬಲಿಸಿದರು.

ಮಾಲೂರು, ಮುಳುಬಾಗಿಲು, ಚಿಂತಾಮಣಿ, ಗೌರಿಬಿದನೂರುಗಳಲ್ಲೂ ನೂರಾರು ಜನರಿಂದ ಮೌನ ಮೆರವಣಿಗೆ ನಡೆಯಿತು.

**ತುಮಕೂರು:**

ಹಿಂದೊಮ್ಮೆ ತೋಳಗಳ ಹಾವಳಿಯಿಂದ ತತ್ತರಿಸಿದ್ದ ತುಮಕೂರು ಜಿಲ್ಲೆ ಇದೀಗ ಮಠಾಧೀಶರ ಒಳಜಗಳ, ಬರಗಾಲ, ಜಾತಿವಾದಿ ಶಾಸಕರ ಅಟ್ಟಹಾಸ ಮುಂತಾಗಿ ಒಳಗುದಿಗೆ ಸಿಕ್ಕಿದೆ.

ಅಕ್ಷರ ಕಲಿಕೆಯು ಗುತ್ತಿಗೆದಾರರ ಗದ್ದುಗೆಯ ಕೈ ಅಳತೆಯಲ್ಲಿದ್ದರೂ ದಲಿತ ಸಮುದಾಯಕ್ಕೆ ಅಕ್ಷರಗಳು ಗಗನ ನಕ್ಷತ್ರಗಳು. ಇಂಥ ವ್ಯಂಗ್ಯದ ಬೆನ್ನಲ್ಲೇ ಸಾವಿರಾರು ದ.ಸಂ.ಸ. ಸದಸ್ಯರು ಪಟ್ಟಣದ ಪ್ರಮುಖ ಬೀದಿಗಳಲ್ಲಿ ಮೌನಮೆರವಣಿಗೆ ನಡೆಸಿದರು. ಕಿರಿಯ ಕಾಲೇಜಿನ ಆವರಣದಿಂದ ಪ್ರಾರಂಭಗೊಂಡ ಮೆರವಣಿಗೆ ಪುರಸಭೆಯ ಆವರಣದಲ್ಲಿ ಮುಕ್ತಾಯಗೊಂಡಿತು. ಜಿಲ್ಲೆಯ ಇತರ ತಾಲೂಕುಗಳಾದ ಮಧುಗಿರಿ, ಕೊರಟಗೆರೆ, ಪಾವಗಡ, ಗುಬ್ಬಿ. ತಿಪಟೂರು, ಚಿಕ್ಕನಾಯಕನಹಳ್ಳಿಗಳಲ್ಲೂ ನೂರಾರು ದ.ಸಂ.ಸ. ಸದಸ್ಯರು ಮೌನಮೆರವಣಿಗೆ ನಡೆಸಿದರು.

**ಬೆಂಗಳೂರು:**

ರಾಜಧಾನಿ ಬೆಂಗಳೂರಿನ ಡಾಂಬರು ರಸ್ತೆಗಳಲ್ಲಿ ನಿರ್ದಯ ನಾಗರಿಕತೆಯ ಗಗನಚುಂಬಿ ಕಟ್ಟಡಗಳ ನೆರಳಲ್ಲಿ ದಲಿತರ ಮೌನ ಮೆರವಣಿಗೆ ನಡೆಯಿತು.

ರೋಗಗ್ರಸ್ತ ರಾಜಕಾರಣಕ್ಕೆ ಚೂರೇ ಚೂರು ಉಸಿರು ತುಂಬುವ ಕಬ್ಬನ್‌ಪಾರ್ಕಿನ ಹಸಿರು ನೆರಳಲ್ಲಿ ನೆರೆದ ಮೆರವಣಿಗೆಗಾರರನ್ನು ಉದ್ದೇಶಿಸಿ ಮುನಿಎಲ್ಲಪ್ಪ, ಆರ್. ಮುನಿಯಪ್ಪ ಮುಂತಾದವರು ಮಾತನಾಡಿದರು.

ನಾಡಿನ ಮೂಲೆ ಮೂಲೆಯಲ್ಲಿ ನಡೆದ ಈ ಮೌನ ಮೆರವಣಿಗೆಯ ಸುದ್ದಿ ಸರ್ಕಾರದ ಕಿವುಡು ಕಿವಿಗೂ ಮುಟ್ಟಿತು. 1985ರ ಏಪ್ರಿಲ್ 14ರಂದು ಇದೇ ವಿಧಾನಸೌಧದ ಎದುರು ನೆರೆದ ಬೃಹತ್ ಸಮಾವೇಶದಲ್ಲಿ ಮೊಟ್ಟಮೊದಲ ಬಾರಿ ದ.ಸಂ.ಸ. ಹೋಬಳಿಗೊಂದು ವಸತಿ ಶಾಲೆಗೆ ಒತ್ತಾಯಿಸಿತ್ತು. ಅಲ್ಲಿಂದೀಚೆಗೆ ಆಳುವವರ ಕಣ್ಣು ತೆರೆಸಲು ನಾನಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. ಶಾಸಕ ಸಚಿವ ಮಹಾಶಯರನ್ನು ಜಾಗೃತಗೊಳಿಸಿತ್ತು.

ಇಷ್ಟಾದರೂ ಕಣ್ಣು ತೆರೆಯದಿದ್ದ ಸರ್ಕಾರ ಮೊನ್ನೆಯ ಮೌನಮೆರವಣಿಗೆಯ ನಂತರ ಕಣ್ಣು ತೆರೆದಿದೆ. ತಾಲೂಕಿಗೊಂದು ವಸತಿಶಾಲೆ ತೆರೆಯುವುದಾಗಿಯೂ. ಮೊದಲ ಬಾರಿಗೆ ಪ್ರಾಯೋಗಿಕವಾಗಿ 50 ಶಾಲೆಗಳನ್ನು ಪ್ರಾರಂಭಿಸುವುದಾಗಿಯೂ ಹೇಳಿಕೆ ಇತ್ತಿದೆ.

ಈ ಯೋಜನೆಯ ವಿವರವಾದ ಚರ್ಚೆಗಾಗಿ ಸೆಪ್ಟೆಂಬರ್ ಮಧ್ಯಭಾಗದಲ್ಲಿ ಮುಖ್ಯಮಂತ್ರಿ ರಾಮಕೃಷ್ಣ ಹೆಗ್ಡೆ ದ.ಸಂ.ಸ. ನಿಯೋಗವನ್ನು ಆಹ್ವಾನಿಸಿದೆ.

ದ.ಸಂ.ಸ.ದ 16 ತಿಂಗಳುಗಳ ನಿರಂತರ ಹೋರಾಟಕ್ಕೆ ಮೊನ್ನೆಯ ಅಂತಿಮ ಮೌನಮೆರವಣಿಗೆಯ ರಾಜ್ಯವ್ಯಾಪಿ ಕಾರ್ಯಕ್ರಮದಿಂದ ಜಯ ದೊರೆತಿದೆ. ●

# ಮುಖ್ಯಮಂತ್ರಿ ಹೆಗಡೆಗೆ ಘೇರಾವ್



ಹೆಲಿಕಾಪ್ಟರು ಇಳಿದು ಅತಿಥಿಗೃಹಕ್ಕೆ ಬಂದ ಮುಖ್ಯಮಂತ್ರಿ ಹೆಗಡೆಯವರನ್ನು ದಲಿತ ವಿದ್ಯಾರ್ಥಿಗಳ ಘೋಷಣೆ, ಹೋರಾಟದ ಹಾಡುಗಳು ಸ್ವಾಗತಿಸಿದವು.

ಹೆಲಿಕಾಪ್ಟರ್ ಬೆನ್ನೇರಿ ಊರೂರು ಸುತ್ತಿದ ಮುಖ್ಯಮಂತ್ರಿ ರಾಮಕೃಷ್ಣಹೆಗಡೆಯವರನ್ನು ನೆಲಕ್ಕೆ ತಂದು ನಿಲ್ಲಿಸಿದವರು ಕಲಬುರ್ಗಿಯ ದಲಿತರು. ರಾಜ್ಯದಾದ್ಯಂತ ಹಾರ ತುರಾಯಿ, ಭಟ್ಟಂಗಿಗಳ ಜಯಘೋಷ ಮಾತ್ರ ಕಿವಿಗೆ ಬೀಳುತ್ತಿದ್ದ ಮುಖ್ಯ ಮಂತ್ರಿಗಳಿಗೆ ಅಂದು ದಲಿತರ ಆಕ್ರೋಶದ, ಧಿಕ್ಕಾರದ ಘೋಷಣೆಗಳು ಹಿಡಿದು ಅಲ್ಲಾಡಿಸಿದವು. ಗುಲ್ಬರ್ಗಾದ ಗುಲ್‌ಮೊಹರ್‌ನ ನಗು ನಿರೀಕ್ಷಿಸಿ. ಹೆಗಡೆಯವರನ್ನು ದಲಿತರ ಸಿಟ್ಟಿನ, ನೋವಿನ ಮುಖಗಳು ಎದುರುಗೊಂಡವು. ಈ ಅನಿರೀಕ್ಷಿತ ಮುಖಾಮುಖಿ ನಡೆದದ್ದು ಆಗಸ್ಟ್ 8ರಂದು.

ಅಂದು ಮುಖ್ಯ ಮಂತ್ರಿಗಳು ಗುಲ್ಬರ್ಗಾ ನಗರಕ್ಕೆ ಭೇಟಿ ಕೊಟ್ಟಿದ್ದರು. ಜನತಾ ಪಕ್ಷದ ಕುತಂತ್ರದಿಂದಾಗಿ ಕ್ಯಾರಿ ಓವರ್ ಸೌಲಭ್ಯವಿದ್ದೂ ಹಾಸ್ಟೆಲು ಸೌಲಭ್ಯಗಳಿಂದ ವಂಚಿತರಾಗಿದ್ದ ದಲಿತ ವಿದ್ಯಾರ್ಥಿಗಳ ಸಿಟ್ಟು ಇನ್ನೂ ಇಳಿದಿರಲಿಲ್ಲ.

ಸುಮಾರು 500ರಷ್ಟಿದ್ದ ವಿದ್ಯಾರ್ಥಿಗಳು ವಲ್ಲಭ ಬಾಯಿ ಪಟೇಲ್‌ಚೌಕದಿಂದ ಮೆರವಣಿಗೆ ಹೊರಟರು. ಅವರ ಗುರಿ ಈಗಾಗಲೆ ಜಿಲ್ಲೆಯ ಪ್ರತಿಷ್ಠಿತ ರಾಜಕಾರಣಿಗಳು, ಹಿಂಬಾಲಕರು, ಸರಕಾರಿ ಅಧಿಕಾರಿಗಳಿಂದ ತುಂಬಿ ಹೋಗಿದ್ದ ಐವಾನ್‌ಷಾಹಿ ಅತಿಥಿ ಗೃಹಕ್ಕೆ ತೆರಳುವದಾಗಿತ್ತು.

ಆದರೆ ಧಿಕ್ಕಾರದ ಘೋಷಣೆಗಳ ಮೂಲಕ ಬೆಳೆಯುತ್ತಾ ಮುಂದೆ ಸಾಗಿದ್ದ ಮೆರವಣಿಗೆಕಾರರನ್ನು ಪೊಲೀಸರು ಮಧ್ಯದಲ್ಲೇ ತಡೆದರು. ಮೆರವಣಿಗೆಕಾರರ ಮತ್ತು ಪೊಲೀಸ್ ಅಧಿಕಾರಿಗಳ ಮಧ್ಯ ಬಿಸಿ ಬಿಸಿ ಚರ್ಚೆ ಪ್ರಾರಂಭವಾಯಿತು. ಮೆರವಣಿಗೆಕಾರರು ನಿಂತಲ್ಲೇ ಕುಂತರು. ಆ ಕುಂತಜನರನ್ನೇ ಸಭೆಯನ್ನಾಗಿಸಿಕೊಂಡು ಡಿ. ಜಿ. ಸಾಗರ್ ಮಾತಾಡಲು ಎದ್ದು ನಿಂತರು. ಘೋಷಣೆ ಕೂಗುತ್ತಿದ್ದ ಬಾಯಿಗಳು ನಿಂತು ಕಿವಿಯಾದವು. ಇತ್ತ ಸಭೆ, ಭಾಷಣ ಸಾಗುತ್ತಿರುವಾಗ ಅತ್ತ ಪೊಲೀಸ್ ಮೈದಾನದಲ್ಲಿ ನಿರ್ಮಿಸಲಾಗಿದ್ದ ಹೆಲಿಪ್ಯಾಡ್‌ನಲ್ಲಿ ಹೆಗಡೆ ಭರ್‍ರಂತ ಬಂದಿಳಿದರು. ಅಡಿಷನಲ್ ಎಸ್. ಪಿ. ಮೋತಿರಾಮ್ ಅವರು ಹೆಗಡೆಯವರೊಂದಿಗೆ ಎಲ್ಲಕ್ಕಿಂತ ಮೊದಲೇ ಭೇಟಿ ಏರ್ಪಡಿಸುವುದಾಗಿ ಭರವಸೆ ಇತ್ತದ್ದರಿಂದ ಸಭೆ ಮತ್ತೆ ಮೆರವಣಿಗೆಯಾಗಿ ಅತಿಥಿ ಗೃಹದ ಹೊರ ಹೆಬ್ಬಾಗಿಲಿಗೆ ಬಂದು ಮುಟ್ಟಿತು.

ಅತಿಥಿಗೃಹದ ಒಳ ಸೇರಿದ ಮೆರವಣಿಗೆಕಾರರು ಹೋರಾಟದ ಹಾಡುಗಳನ್ನು ಹಾಡತೊಡಗಿದರು. ಇವರ ಹಾಡುಗಳು ಹೆಗಡೆಯವರಿಗೆ ಸ್ವಾಗತ ಗೀತೆ ಹಾಡಲು ನೆರೆದವರ ಬಾಯಿ ಮುಚ್ಚಿಸಿದವು. ಹೀಗಾಗಿ ಕಾರಿಳಿದು ಬಂದ ಹೆಗಡೆಯವರನ್ನು ಸ್ವಾಗತಿಸಿದ್ದು ಹೋರಾಟದ ಹಾಡು ಮತ್ತು ಘೋಷಣೆಗಳು ಮಾತ್ರ.

ಕಾರಿಳಿದು ಬಂದ ಹೆಗಡೆ–ಮೆರವಣಿಗೆಕಾರರ ಬಳಿಗೆ ಬಂದರು. ಅವರ ಬೇಡಿಕೆಗಳನ್ನು ಒಂದೊಂದಾಗಿ ಡಿ. ಜಿ. ಸಾಗರ್ ಓದಿ ಹೇಳತೊಡಗಿದಾಗ ನಿಂತೇ ಕೇಳುತ್ತಾ, ಅಲ್ಲಲ್ಲಿ ಪರಿಹಾರ ಸೂಚಿಸುತ್ತಾ, ಸಬೂಬು ಹೇಳುತ್ತಾ ಅರ್ಧ ಗಂಟೆ ಕಳೆದರು.

ದಲಿತ ವಿಧ್ಯಾರ್ಥಿಗಳ ಪ್ರಮುಖ ಬೇಡಿಕೆಯಾದ ಕ್ಯಾರಿ ಓವರ್ ಸೌಲಭ್ಯಕ್ಕನುಗುಣವಾಗಿ ಹಾಸ್ಟೆಲು ಸೌಲಭ್ಯ ಒದಗಿಸುವ ಬರವಸೆ ಸಿಕ್ಕಿತು. ಖಾಸಗಿ ವಿದ್ಯಾರ್ಥಿನಿಲಯಗಳ ಅವ್ಯವಹಾರ ತನಿಖೆಗೆ ಆದ್ಯತೆ ಸಿಕ್ಕಿತು. ದಲಿತ ಮಕ್ಕಳಿಗೆ ಹಾಸ್ಟೆಲು ತೆರೆಯುವಂತೆ ಖಾಸಗೀ ವಿದ್ಯಾಸಂಸ್ಥೆಗಳಿಗೆ ಆದೇಶ ನೀಡುವ ಆಶ್ವಾಸನೆ ದೊರೆಯಿತು. ಮೆರವಣಿಗೆಯೊಂದಿಗೆ ಜತೆಗೂಡಿ ಬಂದಿದ್ದ ಎ. ಐ. ಡಿ. ಎಸ್. ಓ. ರವರ ಕ್ಯಾಪಿಟೇಷನ್ ರದ್ದು ಬೇಡಿಕೆಗೆ 'ಆಗದು' ಎಂಬ ನುಣುಚು ನೆಪವೊಡ್ಡಿ ಹೆಗಡೆ ಜಾರಿಕೊಂಡರು. ಹಾಸ್ಟೆಲು ಸಮಸ್ಯೆಗಳ ಪರಿಶೀಲನೆಗೆ ಸಮಾಜ ಕಲ್ಯಾಣ ಸಚಿವ ಬಸವಣ್ಣಪ್ಪ ಮರುದಿನವೂ ಉಳಿಯುವುದಾಗಿ ಹೇಳಿದರು.

ಮರುದಿನ ತುಂಬು ಕಾತುರದಿಂದ ಕಾದಿದ್ದ ದಲಿತ ವಿದ್ಯಾರ್ಥಿಗಳಿಗೆ ಬಸವಣ್ಣಪ್ಪ ಅವರಿಂದ ಸಿಕ್ಕಿದ್ದು ನಿರಾಶೆಯ ಬಳುವಳಿ. ಚರ್ಚೆಗೆ ಹೋದವರನ್ನು ಸಚಿವರು ನಿಲ್ಲಿಸಿಕೊಂಡೇ ಸಾಗಹಾಕಲು ಯತ್ನಿಸಿದರು. ತೀವ್ರ ಒತ್ತಾಯಕ್ಕೆ ಮಣಿದು 30 ನಿಮಿಷದ ಚರ್ಚೆಗೆ ಸಚಿವರು ಒಪ್ಪಿಕೊಂಡರೂ ಅದರಿಂದ ನಿರೀಕ್ಷಿತ ಫಲ ದೊರೆಯಲಿಲ್ಲ. "ನೋಡುತ್ತೇನೆ, ಮಾಡುತ್ತೇನೆ, ಚರ್ಚಿಸುತ್ತೇನೆ" ಎನ್ನುತ್ತಾ ಮಾಮೂಲಿ ಉದಾಸೀನ ತೋರಿದರು. ಜೋರುಮಾಡಿ ಕೇಳಿದಾಗ "ನನಗೂ ಕಾಳಜಿ ಇದೆ, ನಾನೂ ಹಾಸ್ಟೆಲಿನಲ್ಲಿಯೇ ಓದಿದ್ದು" ಎಂದು ಮುಂತಾಗಿ ಹಾರಾಡಿದರು.

ಚರ್ಚೆ ಮುಗಿದ ನಂತರ ಕೇವಲ ಎರಡು ಹಾಸ್ಟೆಲಿಗೆ ಮಾತ್ರ ಭೇಟಿ ನೀಡಿ ಎಲ್ಲಾ ಹಾಸ್ಟೆಲಿಗೂ ಭೇಟಿ ನೀಡಿದ್ದಾಗಿ ಪತ್ರಿಕಾ ಹೇಳಿಕೆ ನೀಡಿ ಅದೃಶ್ಯರಾದರು. ಆ ಮೂಲಕ ದಲಿತ ವಿದ್ಯಾರ್ಥಿನಿಲಯಗಳ ದಯನೀಯ ಸ್ಥಿತಿಗತಿಗಳನ್ನು ಖುದ್ದು ಕಾಣಬಹುದಾಗಿದ್ದ ಒಂದು ಅವಕಾಶವನ್ನೂ ಕಳೆದುಕೊಂಡರು.

ಇಷ್ಟೆಲ್ಲ ಆಗಿಯೂ ದಲಿತ ವಿದ್ಯಾರ್ಥಿಗಳ ಬವಣೆ ಕಡಿಮೆಯಾಗಿಲ್ಲ. ಅವರು ತಮ್ಮ ಕಣ್ಣೆದುರು ಹೋರಾಟದ ಹಾದಿ ಇಟ್ಟುಕೊಂಡು ಅಧಿಕಾರಶಾಹಿಯ ದಿವ್ಯ ನಿರ್ಲಕ್ಷ್ಯವನ್ನು ಮೌನವಾಗಿ ನೋಡತೊಡಗಿದ್ದಾರೆ. ಈ ಮೌನ ಮುಂದೆ ಇನ್ನೊಂದು ಹೋರಾಟವಾಗಿ ಟಿಸಿಲೊಡೆಯುವ ಸಿದ್ಧತೆಯಲ್ಲಿದೆ.

ಜುಲೈ 17 ರಂದು ತುಮಕೂರು ಕೆ. ಸಿ ರಸ್ತೆಯಲ್ಲಿರುವ ಸರ್ಕಾರಿ ಕಲಾ ಕಾಲೇಜ್ ಒಂದನೇ ಹಾಸ್ಟೆಲ್ ನಡೆದ ಜಿಲ್ಲಾ ಆಯ್ಕೆ ಸಮಿತಿಸಭೆಯಲ್ಲಿ ನೂತನ ಸಂಚಾಲಕರ ಆಯ್ಕೆ ನಡೆಯಿತು. ಈ ಕೆಳಕಂಡವರು ಚುನಾವಣೆಯ ಮೂಲಕ ಜಿಲ್ಲಾ ಸಮಿತಿಯ ಪದಾಧಿಕಾರಿಗಳಾಗಿ ಆಯ್ಕೆಯಾದರು.

ಬಿ. ವಿ. ರತ್ನಕುಮಾರ್, ಜಿಲ್ಲಾ ಸಂಚಾಲಕರು,

ನರಸಿಂಹರಾಜು, ಜಿಲ್ಲಾ ಸಂಘಟನಾ ಸಂಚಾಲಕರು

ಸಿ. ಎನ್. ನಾಗಯ್ಯ, ಜಿಲ್ಲಾ ಖಜಾಂಚಿ.

ಇದೇ ಸಂದರ್ಭದಲ್ಲಿ ಟಿ. ಹೆಚ್. ಶಿವಕುಮಾರ್ ಅವರು ತುಮಕೂರು ನಗರ ಸಂಚಾಲಕರಾಗಿ ಆಯ್ಕೆಯಾದರು.

ತುಮಕೂರು ಜಿಲ್ಲೆ ಕೊರಟಗೆರೆ ತಾ॥ ದಾಸರಹಳ್ಳಿಯಲ್ಲಿ ಇತ್ತೀಚೆಗೆ 2 ದಿನಗಳ ಕಾರ್ಯಕರ್ತರ ಅಧ್ಯಯನ ಶಿಬಿರವನ್ನು ಏರ್ಪಾಟು ಮಾಡಲಾಗಿತ್ತು. ತಾ॥ ಸಮಿತಿಯು ಏರ್ಪಾಟು ಮಾಡಿದ್ದ ಈ ತಾ॥ ಮಟ್ಟದ ಶಿಬಿರದಲ್ಲಿ, ಸುಮಾರು 60ಜನ ಕಾರ್ಯಕರ್ತರು ಭಾಗವಹಿಸಿದ್ದರು. ಈ ಶಿಬಿರದಲ್ಲಿ ನರಸಿಂಹಯ್ಯ, ಕೃಷ್ಣಪ್ಪ ಬೆಲ್ಲದಮಡು, ಕೆ. ಬಿ. ಸಿದ್ದಯ್ಯ, ಕೆ. ಎಂ. ಕೊಮ್ಮಣ್ಣ, ರಾಮಚಂದ್ರ, ರಾಮಯ್ಯ, ಅವರು ತಮ್ಮ ವಿಚಾರಗಳನ್ನು ಮಂಡಿಸಿದರು.

ಜುಲೈ 27 ರಂದು ಹಾಸನದಲ್ಲಿ ನಡೆದ ಜಿಲ್ಲಾ ಆಯ್ಕೆ ಸಮಿತಿ ಸಭೆಯಲ್ಲಿ ಜಿಲ್ಲಾ ಸಮಿತಿಯ ಹೊಸ ಪದಾಧಿಕಾರಿಗಳನ್ನು ಆಯ್ಕೆ ಮಾಡಲಾಯಿತು.

ಹೆಚ್. ಕೆ. ಕರಿಯಯ್ಯ ಉರುಫ್ ಸಂದೇಶ್- ಜಿಲ್ಲಾ ಸಂಚಾಲಕರು.

ಕೆ. ಎಸ್. ನಿರ್ವಾಣಯ್ಯ—ಜಿಲ್ಲಾ ಸಂಘಟನಾ ಸಂಚಾಲಕರು.

ರಾಜು — ಖಂಜಾಚಿಯಾಗಿ ಬಹುಮತದಿಂದ ಆಯ್ಕೆಗೊಂಡರು.

ತಾ॥ 11-8-1986 ರಂದು ಚಿಕ್ಕಮಗಳೂರು ಜಿಲ್ಲೆ ಕಡೂರಿನಲ್ಲಿ ದ. ಸಂ. ಸ. ಸದಸ್ಯರು ಸಭೆ ಸೇರಿ ತಾಲ್ಲೂಕ್ ಮಟ್ಟದ ದ. ಸಂ. ಸ. ಸಮಿತಿ ರಚಿಸಿದರು. ಹಂಗಾಮಿಯಾಗಿ, ತಾಲ್ಲೂಕ್ ಸಂಚಾಲಕರಾಗಿ, ಗಂಗಾಧರ್‌ನಾಯ್ಕ, ಸಂಘಟನಾ ಸಂಚಾಲಕರಾಗಿ ಸಿ. ಸಿ. ದೀವಕರ್, ಖಜಾಂಚಿಯಾಗಿ ರಾಮಪ್ಪ ಅವರನ್ನು ನೇಮಕ ಮಾಡಲಾಯಿತು.

ಸಭೆಯಲ್ಲಿ ಜಿಲ್ಲಾ ಸಂಚಾಲಕರಾದ ಎಂ. ಡಿ. ಗಂಗಯ್ಯ. ಸ॥ ಸ॥ ರಾದ ರಾಧಾಕೃಷ್ಣ ಸದಸ್ಯರಾದ ಎ. ಕೆ. ಮಂಜಪ್ಪ, ಭಾಗವಹಿಸಿದ್ದರು.

ಸುಮಾರು 70ಕ್ಕೂ ಹೆಚ್ಚು ಜನ ಸದಸ್ಯರು ಸಭೆಯಲ್ಲಿ ಭಾಗವಹಿಸಿದ್ದರು.

# ಮರಗೋಳ ಕಾಲೇಜಿನ ವಿದ್ಯಾರ್ಥಿಗಳ ಮೆರವಣಿಗೆ

**ಬಸ್ಸು ಸೌಕರ್ಯವಿಲ್ಲದೆ ಕೆಸರು, ಧೂಳು ಓಕುಳಿಯ ದಾರಿಯಲ್ಲಿ ಬಸವಳಿದಿದ್ದ ಮರಗೋಳ ಕಾಲೇಜಿನ ವಿದ್ಯಾರ್ಥಿಗಳು ಕೊನೆಗೂ ಪ್ರತಿಭಟನೆಯ ದಾರಿ ತುಳಿದರು. ದ.ಸಂ.ಸ. ಮತ್ತು ದ.ವಿ.ಒ. ಪ್ರತಿಭಟನೆಯನ್ನು ರೂಪಿಸಿತ್ತು.**

ಗುಲಬರ್ಗಾ ಜಿಲ್ಲೆಯ ಶಹಾಬಾದಿನಲ್ಲಿ ಆಗಸ್ಟ 30 ರಂದು 500ಜನ ವಿದ್ಯಾರ್ಥಿಗಳು ಪ್ರತಿಭಟನಾ ಮೆರವಣಿಗೆ ನಡೆಸಿದರು. ಈ ಪ್ರತಿಭಟನೆ ರೂಪಿಸಿದ್ದು ದಲಿತ ಸಂಘರ್ಷ ಸಮಿತಿ ಮತ್ತು ದಲಿತ ವಿದ್ಯಾರ್ಥಿ ಒಕ್ಕೂಟ.

ಸ್ಥಳೀಯ ಎಸ್.ಎಸ್. ಮರಗೋಳ ಕಾಲೇಜಿನ ವಿದ್ಯಾರ್ಥಿಗಳು ಸುಮಾರು ವರ್ಷಗಳಿಂದ ಬಸ್ ಸೌಕರ್ಯಕ್ಕಾಗಿ ಒತ್ತಾಯಿಸುತ್ತಿದ್ದರು. ಕಾಲೇಜು ರೈಲು ನಿಲ್ದಾಣದಿಂದ 2ಕಿ.ಮೀ. ದೂರದಲ್ಲಿದೆ. ರೈಲು ನಿಲ್ದಾಣದಿಂದ ನಿತ್ಯ ಕಾಲೇಜಿಗೆ ನಡೆಯಬೇಕು. ಮಳೆಗಾಲವಾದರೆ ಒಂದು ಕೈಯಲ್ಲಿ ಚಪ್ಪಲಿ, ಇನ್ನೊಂದುಕೈಯಲ್ಲಿ ಪ್ಯಾಂಟು, ಬಗಲಲ್ಲಿ ಪುಸ್ತಕ ಹಿಡಿದುಕೊಂಡು ನಡೆಯಬೇಕು. ಈ ಮದ್ಯೆ ವಾಹನಗಳೇನಾದರೂ ಓಡಾಡಿದರಂತೂ ಕೆಸರಿನ ಓಕುಳಿ. ಮಳೆಗಾಲದ್ದು ಈ ಪರಿಯಾದರೆ ಬೇಸಿಗೆಯದೇ ಬೇರೊಂದು ಗೋಳು. ವಾಹನಗಳ ಧೂಳಿದ್ದು ವಿದ್ಯಾರ್ಥಿಗಳ ಮುಖ, ಮೂತಿಗೆ ರಾಚಿ ಮೇಕಪ್ ಮಾಡಿಡುತ್ತದೆ. ವಿದ್ಯಾರ್ಥಿಗಳು ಹಾಗೂ ಅಧ್ಯಾಪಕರೂ ಕೂಡಿಯೇ ಈ ಗೋಳು ಅನುಭವಿಸಬೇಕು.

ಇಷ್ಟಾದರೂ ಸಂಬಂಧಪಟ್ಟವರು ಗಮನ ನೀಡಿರಲಿಲ್ಲ. ಎ.ಸಿ.ಸಿ. ಮತ್ತು ಎ.ಬಿ.ಎಲ್. ಬಸ್‌ಗಳಿಗೆ ರೈಲ್ವೆ ಸ್ಟೇಷನ್ನಿಂದ ಕಾಲನಿಗೆ ಮತ್ತು ಬಿ.ವಿ.ಎಂ.ಗೆ ಅಡ್ಡಾಡಲು ಪರವಾನಿಗೆ ಕೊಟ್ಟ ಪುರಸಭೆ ಕಾಲೇಜಿನವರೆಗೆ ಅಡ್ಡಾಡಲು ಅನುಮತಿ ನೀಡಿರಲಿಲ್ಲ.

ಈ ಎಲ್ಲ ಸಮಸ್ಯೆಗಳನ್ನು ಪರಿಶೀಲಿಸಿದ ದ.ಸಂ.ಸ. ಹಾಗೂ ದಲಿತ ವಿದ್ಯಾರ್ಥಿ ಒಕ್ಕೂಟ ಸಂಬಂಧಪಟ್ಟವರ ಗಮನ ಸೆಳೆಯಲು ಪ್ರತಿಭಟನಾ ಮೆರವಣಿಗೆ ನಡೆಸಿತು. ಎಸ್.ಎಸ್. ಮರಗೋಳ ಕಾಲೇಜಿನಿಂದ ಹೊರಟ ಮೆರವಣಿಗೆ ಪುರಭವನ ತಲುಪಲು 3ಗಂಟೆ ಕಾಲ ಹಿಡಿಯಿತು. ನಗರ ಸಭಾಧ್ಯಕ್ಷರಾದ ಯುನುಸ್ ಸೇಠ್ ಅವರಿಗೆ ಮನವಿ ಸಲ್ಲಿಸಲಾಯಿತು. ಸ್ಟೇಷನ್‌ನಿಂದ ಕಾಲೇಜಿನವರೆಗೆ ಟಾರು ರಸ್ತೆ,ಬಸ್ ಸೌಕರ್ಯ ದಲಿತ ವಿದ್ಯಾರ್ಥಿಗಳಿಗೆ ಹಾಸ್ಟೆಲು ಸೌಲಭ್ಯ,ನಗರದಲ್ಲಿ ಉತ್ತಮವಾಚನಾಲಯ ಸ್ಥಾಪನೆ ಇವರ ಬೇಡಿಕೆಗಳಾಗಿದ್ದವು. ದ.ಸಂ.ಸ. ಶಹಾಬಾದ್ ಶಾಖೆಯ ಸಂಚಾಲಕ ರಾಜೇಂದ್ರ ಗಾಯಕವಾಡ, ಜಿಲ್ಲಾ ಸಮಿತಿಯ ಜಿ.ಕೆ. ಗೋಖಲೆ ಸಭೆಯಲ್ಲಿ ಮಾತನಾಡಿದರು. ದ.ವಿ.ಒ. ಸಂಚಾಲಕ ಸುರೇಶ್‌ಮೆಂಗನ್ ಧನ್ಯವಾದ ಅರ್ಪಿಸಿದರು.



ಪ್ರತಿಭಟನೆ ನಡೆಸುತ್ತಿರುವ ವಿದ್ಯಾರ್ಥಿಗಳು

# ಹಿಂದೂ ಎಂಬ ಏಕಾಕ್ಷಿ ಜಿಂಕೆಯ ಕತೆ.....

ಈಸೋಪನ ನೀತಿಗಳಲ್ಲಿ ಒಂದು ಜಿಂಕೆಯ ಕಥೆ ಇದೆ. ಈ ಜಿಂಕೆಯು ಒಂದು ಕಣ್ಣು ಕುರುಡಾಗಿತ್ತು. ತನ್ನ ಏಕಾಕ್ಷತೆಯ ಲಾಭ ಪಡೆದು ಶಿಕಾರಿ ಜನರು ಸುಲಭವಾಗಿ ತನ್ನ ಶಿಕಾರಿ ಮಾಡಬಾರದೆಂದು ಆ ಕಾಡಿನ ಕೆರೆಯ ದಡದಲ್ಲಿ ಮೇಯುವಾಗ ಕುರುಡಾದ ಕಣ್ಣು ಕೆರೆಯ ಕಡೆಗೆ ಹಾಗು ಸರಿಯಾದ ಕಣ್ಣು ನೆಲದ ಕಡೆಗೆ ಇರುವಂತೆ ಅದು ಎಚ್ಚರ ವಹಿಸುತಿತ್ತು. ಅದರಿಂದಾಗಿ ಶಿಕಾರಿ ಜನರ ಪ್ರಯತ್ನಗಳು ವ್ಯರ್ಥವಾಗುತ್ತಿದ್ದವು. ಈ ಸಂಗತಿಯು ಒಬ್ಬ ಬೇಟೆಗಾರನ ಲಕ್ಷ್ಯಕ್ಕೆ ಬಂದಿತು. ಅವನು ದೋಣಿಯಲ್ಲಿ ಕುಳಿತು ಕೆರೆಯ ನಡುವೆ ಹೋಗಿ ಅಲ್ಲಿಂದ ಆ ಜಿಂಕೆಗೆ ಗುರಿ ಹಿಡಿದನು. ಕೆರೆಯ ಕಡೆಯಿಂದ ಅಪಾಯವಿಲ್ಲವೆಂದು ತಿಳಿದು ನಿಶ್ಚಿಂತೆಯಿಂದ ಮೇಯುವ ಏಕಾಕ್ಷ ಜಿಂಕೆಗೆ ಬೇಟೆಗಾರನು ಕೆರೆಯ ಕಡೆಯಿಂದ ತನ್ನ ಕಡೆ ಗುರಿಯಿಟ್ಟಿದ್ದಾನೆಂಬುದು ತಿಳಿಯಲಿಲ್ಲ. ಮತ್ತು ಅದರಿಂದಾಗಿ ಕೊನೆಗೆ ಅದರ ಬೇಟೆ ಆಗಿಯೇ ಬಿಟ್ಟಿತು. ಕಳೆದ ಗಣೇಶೋತ್ಸವದಲ್ಲಿ ಪನವೇಲದಲ್ಲಿ ನಡೆದ ಘಟನೆಯ ಮೇಲಿಂದ ಈಸೋಪ ನೀತಿಯಲ್ಲಿನ ಈ ಸಂಗತಿಯು ನೆನಪಾಗದೆ ಇರದು.

ಪನವೇಲನ ಜೀರ್ಣಮತವಾದಿಗಳು ಈ ವರ್ಷ ಅಲ್ಲಿಯ ಕೆರೆಯ ದೇವಘಾಟಿನ ಮೇಲೆ ಅಸ್ಪೃಶ್ಯರು ಗಣಪತಿಯ ವಿಸರ್ಜನೆ ಮಾಡದಂತೆ ಅಡ್ಡಿಯನ್ನುಂಟು ಮಾಡಿ ಸರಕಾರದ ಕಾಲು ಹಿಡಿದರು. ಕೆಲವು ಭಟಜೀಗಳು ಏನೋ ಜನರಿಗೆ ಅಲ್ಲಸಲ್ಲದ ತಿಳುವಳಿಕೆ ಮಾಡಿಕೊಟ್ಟು ತಮ್ಮ ಪಕ್ಷದಲ್ಲಿ ಅವರ ಸಹಿಯನ್ನು ಪಡೆದರು. ಆದರೆ ಇದಕ್ಕೆ ವ್ಯತಿರಿಕ್ತವಾಗಿ, ದೇವಘಾಟಿನ ಮೇಲೆ ಅಸ್ಪೃಶ್ಯರ ಗಣಗತಿಯ ವಿಸರ್ಜನೆಗೆ ತಮ್ಮ ಅಡ್ಡಿಯಿಲ್ಲವೆಂದು ನೂರಾರು ಜನರು ಸರ್ಕಾರಕ್ಕೆ ತಿಳಿಸಿಸಿದರು. ಆಗ ದೇವಘಾಟಿಗೆ ಹೋಗಲು ಬಲ್ಲಾಳೇಶ್ವರ ದೇವಾಲಯದ ಕಡೆಯಿಂದ ಇರುವ ಏಕಮಾತ್ರ ದಾರಿಯು ದೇವಾಲಯದ ಖಾಸಗಿ ಮಾಲಕಿಯದಾಗಿದೆಯೆಂದು ಹೇಳಿ ಮಡಿವಂತರು, ಆ ರಸ್ತೆಯಿಂದ ಗಣಗತಿ ಒಯ್ಯಲು ನಿಷೇಧವಿರುವ ಬಗ್ಗೆ ಮಾಮಲೇದಾರರಿಂದ ಹುಕುಮನ್ನು ಪಡೆದರು. ಕೆರೆ ಮತ್ತು ದೇವಘಾಟ ಇವು ಖಾಸಗಿಯಾಗಿರದಿದ್ದರೂ ಕೂಡ ದೇವಘಾಟಿಗೆ ಹೋಗುವ ದಾರಿಯನ್ನು ಖಾಸಗಿ ಎಂದು ಠರಾಯಿಸಿ ಬಿಟ್ಟರೆ, ಅಸ್ಪೃಶ್ಯರಿಗೆ ತನ್ನಷ್ಟಕ್ಕೆ ತಡೆ ಹಾಕಿದಂತಾಗುವದೆಂಬುದು ಮಡಿವಂತ ಜನರ ತಿಳುವಳಿಕೆಯಾಗಿತು. ಹಾಗಾಗಿ ಅವರು ಈ ಮೇಲಿನ ಯುಕ್ತಿ ಮಾಡಿದರು. ಆದರೆ ಕೊನೆಯಲ್ಲಿ ಅವರು ಈ ಯುಕ್ತಿಯು ಮೋಸ ಹೋಯಿತು ! ಬಹಿಷ್ಕೃತ ವರ್ಗದ ಗಣಪತಿಯನ್ನು ಪನವೇಲ ಮುನಿಸಿಪಾಲಿಟಿಯ ಅಧ್ಯಕ್ಷರಾದ ಶ್ರೀ ಆತ್ಮಾರಾಮ ಶೇಟ ಆಟವಣೆಯವರ ಗಣಗತಿಯೊಂದಿಗೆ ದೋಣಿಯಲ್ಲಿ ಕುಳ್ಳಿರಿಸಿ ದೇವಘಾಟಿಗೆ ಒಯ್ಯಲಾಯಿತು, ಮತ್ತು ಅಲ್ಲಿ ಬಹಳ ವಿಜೃಂಭಣೆಯಿಂದ ವಿಸರ್ಜನೆಯ ಸಮಾರಂಭವನ್ನು ನಡೆಸಲಾಯಿತು. ಈ ರೀತಿಯಾಗಿ ದುರಾಗ್ರಹಿ ಮಡಿ

---

"ಅಕ್ಷರಗಳ ಬೆಳಕೇ ಕಾಣದ ದಿನಗಳಲ್ಲಿ ಡಾ॥ ಬಾಬಾಸಾಹೇಬ್ ಅಂಬೇಡ್ಕರ್‌ರವರು ದಲಿತರಿಗಾಗಿಯೇ ಪತ್ರಿಕೆಗಳನ್ನು ಪ್ರಾರಂಭಿಸಿದರು. ದಲಿತರ ಶತಮಾನಗಳ ಮೂಕ ಯಾತನೆಗೆ ದನಿ ಕೊಟ್ಟರು.

ಅವರು 'ಮೂಕನಾಯಕ' 'ಬಹಿಷ್ಕೃತ ಭಾರತ' ಮತ್ತು 'ಸಮತಾ' ಪತ್ರಿಕೆಗಳನ್ನು ತಂದು ದಲಿತ ಸಮುದಾಯದಲ್ಲಿ ಜಾಗೃತಿಯ ಕಹಳೆ ಊದಿದರು. ಅವರ ವಿರೋಧಿಗಳು 'ಮುದ್ರಣಾಲಯ'ಕ್ಕೆ ಬೆಂಕಿ ಹಚ್ಚಿದ್ದರಿಂದ 'ಬಹಿಷ್ಕೃತ ಭಾರತ'ದ ಎಲ್ಲಾ ಪ್ರತಿಗಳೂ ನಾಶವಾದವು. ಅವುಗಳ ಸಂಗ್ರಹಕ್ಕೆ ಸ್ವತಃ ಅಂಬೇಡ್ಕರರೇ ಕರೆ ಕೊಟ್ಟರೂ ದೊರೆತಿರಲಿಲ್ಲ.

ಅವರ ಮರಣಾನಂತರ ಅವರ ಆತ್ಮೀಯರಲ್ಲೊಬ್ಬರಾದ ನಾಸಿಕದ ಶ್ರೀ ಶಂಜಾಜಿ ನವಸಾಜ ಜಾಧವ ಎಂಬುವರು 'ಬಹಿಷ್ಕೃತ ಭಾರತ'ದ ಎಲ್ಲ ಪ್ರತಿಗಳನ್ನೂ ಸಂಗ್ರಹಿಸಿಟ್ಟಿದ್ದರು. ಇವರಿಂದ ನಾಗಪುರದ ಶ್ರೀ ರತ್ನಾಕರ ಗಣವೀರ ಪ್ರಸಂಗವಶಾತ್ ಪಡೆದು ಅಂಬೇಡ್ಕರರ ಸಂಪಾದಕೀಯಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಿದರು. ಹಾಗೆಯೇ ಅವರ ಸ್ಫುಟ ಲೇಖನಗಳೂ ಕೂಡ ಸಂಗ್ರಹಗೊಂಡು ಮರಾಠಿಯಲ್ಲಿ ಪ್ರಕಟಗೊಂಡವು.



ಈ ಎಲ್ಲ ಅಪರೂಪದ ಸ್ಫುಟ ಲೇಖನಗಳನ್ನು ಮರಾಠಿಯಿಂದ ಕನ್ನಡಕ್ಕೆ ಡಾ॥ ದತ್ತಾತ್ರೇಯ ಪೂಜಾರಿ ಹಾಗೂ ಡಾ॥ ಗೀತಾ ಪೂಜಾರಿ ಅನುವಾದಿಸಿದ್ದಾರೆ. ಇದನ್ನು ಕಾರವಾರದ 'ಸಾಗರದೀಪ' ಪ್ರಕಾಶನದ ಶ್ರೀ ದೀಪಕ್ ಗಾಂವ್‌ಕರ್ "ಡಾ॥ ಅಂಬೇಡ್ಕರ್ ಅವರ ಬಹಿಷ್ಕೃತ ಭಾರತದಲ್ಲಿನ ಸ್ಫುಟ ಲೇಖನಗಳು" ಎಂಬ ಗ್ರಂಥವಾಗಿ ಹೊರತಂದಿದ್ದಾರೆ. ಆ ಮೂಲಕ ಸ್ವತಃ ಮರಾಠಿಗರಿಗೇನೆ ಅಲಭ್ಯವಿದ್ದ ಈ ಬರಹಗಳನ್ನು ಕನ್ನಡಿಗರೂ ಓದುವಂತಹ ಅವಕಾಶ ಕಲ್ಪಿಸಿದ್ದಾರೆ.

ಅಂಬೇಡ್ಕರ್‌ರ ವಿಚಾರ, ವ್ಯಕ್ತಿತ್ವಗಳ ಚುಂಬಕ ಶಕ್ತಿಗೆ ಆಕರ್ಷಿತರಾದ, ಸಂಶೋಧಕ, ವಿಮರ್ಶಕರೆಲ್ಲರಿಗೂ ಇದು ಅಮೂಲ್ಯ ಗ್ರಂಥ. ಅಕ್ಷರ ಬಲ್ಲ ಪ್ರತಿ ದಲಿತನೂ ಸಂಗ್ರಹಿಸಿಟ್ಟುಕೊಳ್ಳಬೇಕಾದ ಪುಸ್ತಕ ಇದು.

ದಲಿತರ ಬದುಕಿನ ಸಂಕ್ರಮಣ ಕಾಲದಲ್ಲಿ ಒಂದು ಮಹಾನ್ ಚೇತನದ ಚಿಂತನೆಯ ಎಳೆಗಳನ್ನು ಕಂಡುಕೊಳ್ಳಲು ಈ ಪುಸ್ತಕ ಸಹಾಯಕ. ಈ ಪುಸ್ತಕದ ಒಂದು ಬರಹವನ್ನು ಇಲ್ಲಿ ಪ್ರಕಟಿಸಲಾಗಿದೆ.

ಸುಮಾರು 57 ವರ್ಷಗಳ ಹಿಂದೆ ದಲಿತರು ಗಣೇಶನನ್ನು ಪೂಜಿಸಿ ವಿಸರ್ಜಿಸಲು ಮುಂದಾದಾಗ. ಮತಾಂಧ ಹಿಂದೂಗಳು ಹೂಡಿದ ಕುಟಿಲ ತಂತ್ರಗಳ ಹಿನ್ನೆಲೆಯಲ್ಲಿ ಡಾ॥ ಅಂಬೇಡ್ಕರ್ ಬರೆದ ಬರಹ ಇದು.

ಇವತ್ತಿನ ಮತಾಂಧರ ಮನಸ್ಸಿಗೆ ಹಿಡಿದ ಕನ್ನಡಿಯಂತಿದೆ ಈ ಲೇಖನ.

ಪ್ರತಿ ದೊರೆಯುವ ವಿಳಾಸ :

**ಸಾಗರದೀಪ ಪ್ರಕಾಶನ**

**ಕಾರವಾರ**

**ಪುಟ : 400**

**ಬೆಲೆ : 50ರೂ.**

ವಂತ ಜನರಿಗೆ ಕೊನೆಯಲ್ಲಿ ಏಕಾಕ್ಷ ಜಿಂಕೆಯಂತೆ ಮೋಸವಾಯಿತು! ಕಳೆದ ವರ್ಷ ಬಹಿಷ್ಕೃತರ ಗಣಪತಿಯ ವಿಸರ್ಜನೆಯನ್ನು ದೇವಘಾಟಿನ ಮೇಲೆ ಮಾಡಲಾಗಿತ್ತು ಮತ್ತು ಆಗ ಯಾರೂ ಅಡ್ಡಿ ಪಡಿಸಿರಲಿಲ್ಲ. ಇಷ್ಟೇ ಅಲ್ಲ, ಆಮೇಲೆ ಘಾಟಿನ ಶುದ್ಧಿಯನ್ನು ಕೂಡ ಯಾರೂ ಮಾಡಿರಲಿಲ್ಲ. ಈ ವರ್ಷವಾದರೂ ದೇವಘಾಟಿನ ಮೇಲೆ ಮಡಿವಂತರು ಫೆನಾಯಿಲ್ ಉರ್ಫ್ ಗೋಮೂತ್ರವನ್ನು ಸಿಂಪಡಿಸಿ ಮತ್ತು ಅನಂತರ ಒಂದು ಬ್ರಾಹ್ಮಣ-ಭೋಜನ ಹಾಕಿ ಅದನ್ನು ಶುದ್ಧಗೊಳಿಸುವರೋ ಇಲ್ಲವೋ ನೋಡಬೇಕಾಗಿದೆ. ಊರೊಳಗಿನ ಜನರು ವರ್ಗಣಿ ಕೊಡಲು ಸಿದ್ಧರಿದ್ದರೆ, ಮಂತ್ರ-ಪಠಣ ಪೂರ್ವಕವಾಗಿ ಮತ್ತು ಬ್ರಾಹ್ಮಣ-ಭೋಜನ ಸಹಿತವಾಗಿ ಶುದ್ಧಿ, ಸಮಾರಂಭ ನಡೆದೀತೆಂಬುದನ್ನು ಹೇಳಬೇಕಾಗಿಲ್ಲ. ಇರಲಿ. ಪನವೇಲದಲ್ಲಿ ಬಹಿಷ್ಕೃತರ ಗಣಪತಿಯ ವಿಸರ್ಜನೆಯನ್ನು ದೇವಘಾಟಿನ ಮೇಲೆ ನಡೆಸಲು ಸಹಾಯ ಮಾಡಿದ ಜನರಿಗೆ ಅಸ್ಪೃಶ್ಯ ವರ್ಗವು ಆಭಾರಿಯಾಗಿದೆ. ಈ ವಿಷಯದಲ್ಲಿ ಶ್ರೀ ಆತ್ಮಾರಾಮ ಶೇಟರಿಗೆ ವಿಶೇಷವಾಗಿ ಧನ್ಯವಾದಗಳನ್ನು ಅರ್ಪಿಸಬೇಕು. ಅವರು ವಾರಕರಿ ಸಂಪ್ರದಾಯದವರಾಗಿದ್ದಾರೆ. ಆದರೆ ಅವರ ಧಾರ್ಮಿಕ ಮತ್ತು ಸಾಮಾಜಿಕ ವಿಚಾರಗಳು ಆ ಸಂಪ್ರದಾಯದಲ್ಲಿನ ಇತರ ಅನೇಕ ಜನರ ಹಾಗೆ ಅನುದಾರವಾಗಿಲ್ಲ. ಪನವೇಲದ ಈ ಉದಾರ ಮತವಾದಿ ಜನರು ಮತ್ತು ಅಲ್ಲಿಯ ಬಹಿಷ್ಕೃತ ಸಮಾಜವು ಈ ಪ್ರಕರಣವನ್ನು ಇಲ್ಲಿಗೇ ನಿಲ್ಲಿಸದೆ, ಬಲ್ಲಾಳೇಶ್ವರ ದೇವಾಲಯದ ಹತ್ತಿರದಿಂದ ದೇವಘಾಟಿಗೆ ಹೋಗುವ ದಾರಿಯು ಖಾಸಗಿಯಾಗಿರುವ ಬಗ್ಗೆ ದುರಾಗ್ರಹಿ ಮಡಿವಂತರು ಮುಂದೆ ಮಾಡಿರುವ ಸುಳ್ಳು ಹೇಳಿಕೆಯ ನಿರ್ಣಯವನ್ನು ಕಾಯಮ್ಮಾಗಿ ನಿರ್ಧರಿಸಿಬಿಡಿಸಿಕೊಂಡೀತೆಂಬ ಆಶೆ ನಮಗಿದೆ.

ಈಸೋಪ ನೀತಿಯಲ್ಲಿನ ಏಕಾಕ್ಷ ಜಿಂಕೆಯಂತೆಯೇ ಹಿಂದೂ ಸಮಾಜವು ಅನೇಕ ವಿಷಯಗಳಲ್ಲಿ ಏಕಾಕ್ಷವಾಗಿದೆ. ಅದರ ಒಂದು ಕಣ್ಣನ್ನು ರೂಢಿಯು ಒಡೆದು ಹಾಕಿದೆ. ಈ ಒಡೆದ ಕಣ್ಣು ಇರುವ ಕಡೆ ಹಿಂದೂ ಸಮಾಜಕ್ಕೆ ಏನೂ ಕಾಣುವುದಿಲ್ಲ. ಇಷ್ಟೇ ಅಲ್ಲ, ಈ ಒಡಕು ಕಣ್ಣನ್ನು ತನಗೆ ಅನುಕೂಲವಾಗಿರುವ ಕಡೆ ತಿರುಗಿಸಿ ಆತ್ಮ ವಂಚನೆ ಮಾಡುವ ಕಲೆಯನ್ನು ಹಿಂದೂ ಸಮಾಜವು ಸಾಧ್ಯವಾಗಿಸಿಕೊಂಡಿದೆ. ಇಂಗ್ಲೆಂಡಿನ ನೌಕಾ ಪಡೆಯ ಯೋಧನಾದ ನೆಲ್ಸನ್ನನ ಬಗ್ಗೆ ಒಂದು ಘಟನೆಯನ್ನು ಹೇಳಲಾಗುತ್ತದೆ. ಯುದ್ಧವನ್ನು ನೋಡುವಾಗ ಒಮ್ಮೆ ಆತನು ಮುದ್ದಾಮಾಗಿ ತನ್ನ ಒಡಕು ಕಣ್ಣಿಗೆ ದುರ್ಬೀನನ್ನು ಹಚ್ಚಿಕೊಂಡಿದ್ದನು. ನಮ್ಮ ಮಡಿವಂತ ವೀರರು ಹೊಸ-ಹಳೆಯ ವಾದದಲ್ಲಿ ಹೀಗೆಯೇ ಮಾಡುತ್ತಿರುತ್ತಾರೆ. ಅಂತರವಿಷ್ಟೇ, ನೆಲ್ಸನ್ನನು ಟ್ರಾಫಲ್ಗಾರ್ ಯುದ್ಧವನ್ನು ಜಯಿಸಿದನು ಮತ್ತು ಇವರದು ಮಾತ್ರ ಯಾವಾಗಲೂ ಹಿಮ್ಮೆಟ್ಟುವಿಕೆಯೇ ಆಗುತ್ತಿರುತ್ತದೆ! ಹಿಂದೂ ಸಮಾಜದ ಸರಿಯಾಗಿರುವ ಕಣ್ಣಿಗೆ ಅದ್ವೈತವಾದ ಮತ್ತು "ಶುನಿಚೈವ ಶ್ವಪಾಕೇಚ ಬ್ರಾಹ್ಮಣೇ ಗವಿ ಹಸ್ತಿನಿ" ಎಂಬ ಸಮತವಾದ ಮತ್ತು "ಯಾತಿಕುಳ ಯೆಥೇ ಆಸೆ ಅಪ್ರಮಾಣ ! ಗುಣಾಂಚೆ ಕಾರಣ ಅಸೇ ಅಂಗಿ" (ಜಾತಿ ಕುಲಗಳು ಪ್ರಮಾಣವಲ್ಲ, ಮನುಜನಲ್ಲಿರುವ ಗುಣಗಳೇ ಮುಖ್ಯ) ಎಂಬ ತುಕಾರಾಮ ಸಂತರ ಯುಕ್ತಿವಾದ ಕಂಡು ಬರುತ್ತದೆ. ಆದರೆ ಸಮಾಜದಲ್ಲಿನ ವಿಷಮತೆಯ ಕಡೆ ಅದು ತನ್ನ ಒಡಕು ಕಣ್ಣನ್ನು ತಿರುಗಿಸಿಕೊಂಡಿರುತ್ತದೆ. ಸರಿಯಾದ ಕಣ್ಣಿಗೆ ರಾಜಕೀಯ ಗುಲಾಮಗಿರಿ ಕಾಣುತ್ತದೆ. ಆದರೆ ಸಮಾಜಿಕ ಗುಲಾಮಗಿರಿಯು ಒಡಕು ಕಣ್ಣಿನ ಪಾಲಿಗೆ ಬಂದಿರುತ್ತದೆ. ಸರಿಯಾದ ಕಣ್ಣಿಗೆ ಧರ್ಮಶಾಸ್ತ್ರದಲ್ಲಿನ ಸ್ವಚ್ಛತೆಯ ಉಪದೇಶ ಕಾಣುತ್ತದೆ. ಆದರೆ ಬ್ರಾಹ್ಮಣರ ಕಾಲಿನ ಹೊಲಸು ನೀರನ್ನು ಕುಡಿಯುವುದರಿಂದ ಬ್ರಾಹ್ಮಣೇತರರಿಗೆ ಮೋಕ್ಷ ಲಾಭವಾಗುತ್ತದೆ ಎಂಬ ಶಿಕ್ಷಣದ ಅಸಭ್ಯತನವನ್ನು ಒಡಕು ಕಣ್ಣಿನಿಂದ ನೋಡಲಾಗುತ್ತದೆ. ಸರಿಯಾದ ಕಣ್ಣಿಗೆ ಮುಸಲ್ಮಾನ ಮತ್ತು ಕ್ರಿಶ್ಚಿಯನ್ ಧರ್ಮದ ಆಕ್ರಮಣಗಳು ಕಾಣುತ್ತವೆ ಮತ್ತು ಅದರಿಂದಾಗಿ ಸಂಘಟನೆ ಹಾಗೂ ಶುದ್ಧಿಗಳ ಅವಶ್ಯಕತೆಯು ಮನದಟ್ಟಾಗುತ್ತದೆ. ಆದರೆ ಅಂತಸ್ಥವಾಗಿರುವ ವಿಘಟನೆ ಮತ್ತು ಅಂತಃ ಶುದ್ಧಿಯ ಅಭಾವವನ್ನು ನೋಡುವ ವೇಳೆಗೆ ಒಡಕು ಕಣ್ಣು ಅಡ್ಡಿ ಬರುತ್ತದೆ. ಈ ಒಡಕು ಕಣ್ಣಿನ ಮೇಲೆ ರೂಢಿಪ್ರಿಯತೆ ಮತ್ತು ಸ್ವಾರ್ಥದ ಪರೆ ಬಂದಿದೆ. ಆ ಪರೆಯನ್ನು ಶಸ್ತ್ರಕ್ರಿಯೆಯಿಂದ ತೆಗೆದೊಗೆದು ಕಣ್ಣನ್ನು ಸರಿಮಾಡುವುದು ಶಕ್ಯವಿದೆ. ಆದರೆ ಈ ಕಣ್ಣಿಗೆ ಶಸ್ತ್ರಕ್ರಿಯೆಯನ್ನು ಮಾಡಿಸಿಕೊಳ್ಳಲು ಹಿಂದೂ ಸಮಾಜವು ಸಿದ್ಧವಾಗುವುದಿಲ್ಲ. ಯಾಕೆಂದರೆ ಅದಕ್ಕೆ ತನಗೆ ಅನುಕೂಲವಾದ ರೀತಿಯಲ್ಲಿ ಈ ಕಣ್ಣಿನ ಉಪಯೋಗ ಮಾಡಿಕೊಳ್ಳಲು ಬರುತ್ತದೆ. ●

# ನನಗೆ ನ್ಯಾಯ ಬೇಕು

ಗುಬ್ಬಿ ತಾಲ್ಲೂಕು ಕಸಬಾ ಹೋಬಳಿ ಕಳ್ಳೀಪಾಳ್ಯದ ಸಿದ್ದಲಿಂಗಯ್ಯನ ಮಗಳು ಈರಮ್ಮನಾದ ನಾನು ತಮ್ಮಲ್ಲಿ ಮನವಿ ಮಾಡಿಕೊಳ್ಳುವುದೇನೆಂದರೆ, ಇದೇ ಗ್ರಾಮದ ಸಿದ್ದಯ್ಯನ ಮಗ ಕೃಷ್ಣಪ್ಪ ಎಂಬುವರು ಮದುವೆಯಾಗುತ್ತೇನೆಂದು ಮಾತು ಕೊಟ್ಟು ನನ್ನನ್ನು ನಂಬಿಸಿದರು. ನಾವಿಬ್ಬರೂ ಅಗ್ನಿವಂತ ಮತಕ್ಕೆ ಸೇರಿದವರು, ಒಂದೇ ಜಾತಿಯಾದ್ದರಿಂದ ನನಗೆ ನಂಬಿಕೆ. ಅನಂತರ ನಾವಿಬ್ಬರು ಒಬ್ಬರನ್ನೊಬ್ಬರು ಪ್ರೀತಿಸಿದೆವು. ನಂತರ ನನ್ನನ್ನು ಚಿಕ್ಕಮಗಳೂರಿಗೆ ಕರೆದುಕೊಂಡು ಹೋದರು. ಅಲ್ಲಿ ಕರಿಯಮ್ಮನ ದೇವಸ್ಥಾನದಲ್ಲಿ ನನಗೆ ತಾಳಿಯನ್ನು ಕಟ್ಟಿದರು. ಅಲ್ಲಿ ಕೆಲವು ತಿಂಗಳುಗಳ ಕಾಲ ಇದ್ದೆವು. ಅನಂತರ ನನ್ನನ್ನು ಮತ್ತೆ ಊರಿಗೆ ಕರೆದುಕೊಂಡು ಬಂದರು. ಊರಿನಲ್ಲಿ ನನ್ನ ಪತಿ ಕೃಷ್ಣಪ್ಪನ ಮನೆಗೇ ಬಂದು ಇದ್ದೆವು.

ನಾನು ಗರ್ಭವತಿಯಾದೆ. ನನ್ನ ವಿಷಯ ಅರಿತ ಊರಿನ ಪ್ರಮುಖರು ನನ್ನ ವಿಷಯದ ಬಗ್ಗೆ ನ್ಯಾಯ ಮಾಡಿದರು. ನ್ಯಾಯದಲ್ಲಿ ಕೃಷ್ಣಪ್ಪ ನನ್ನನ್ನು ಬಿಟ್ಟುಬಿಡುತ್ತೇನೆಂದು ಹೇಳಿದ. ನ್ಯಾಯದಲ್ಲಿನ ಮುಖಂಡರು ಮರು ಮಾತಾಡಲಿಲ್ಲ. ಬಳಿಕ ನನ್ನ ಪತಿ ನನ್ನನ್ನು ಮನೆಯಿಂದ ಆಚೆಗೆ ಅಟ್ಟು ಎಂದು ಅವರ ಅಣ್ಣನಿಗೆ ಹೇಳಿ ಮನೆಯಿಂದ ನಾಪತ್ತೆಯಾದ. ನನ್ನ ಪತಿಯ ಅಣ್ಣ ನನ್ನ ಬಟ್ಟೆಗಳನ್ನು ಮನೆಯಿಂದ ಆಚೆಗೆ ಎಸೆದು, ನನ್ನನ್ನು ಕತ್ತು ಹಿಡಿದು ಮನೆಯಿಂದ ಆಚೆ ನೂಕಿದರು. ಆಮೇಲೆ ನನಗೆ ಆಶ್ರಯ ತಪ್ಪಿತು. ಗರ್ಭವತಿಯಾದರೂ ಜೀವನೋಪಾಯಕ್ಕೆ ಒಂದು ಮಾರ್ಗವನ್ನು ಮಾಡಿಕೊಂಡು, ಪಕ್ಕದ ನಾರಿನ ಮಿಲ್‌ನಲ್ಲಿ ಕೂಲಿ ಕೆಲಸಕ್ಕೆ ಸೇರಿಕೊಂಡೆ. ತಂದೆ-ತಾಯಿಗಳು ನನ್ನನ್ನು ದೂರ ಮಾಡಿದರು. ಯಾರ ಆಶ್ರಯವೂ ನನಗೆ ಇಲ್ಲದಾಯಿತು. ಇಲ್ಲಿನ ಸಾರ್ವಜನಿಕ ಬಸ್ ತಾಣವೇ ನನಗೆ ಆಶ್ರಯ ಕೊಟ್ಟಿತು.

ಹೀಗಿರುವಾಗ ಇನ್ನೂ ತೃಪ್ತರಾಗದ ನನ್ನ ಪತಿಯ ಅಣ್ಣ ಮತ್ತು ಜೊತೆಯವರು ಈ ಊರನ್ನೇ ಬಿಟ್ಟು ಹೋಗು ಎಂದು ಹಿಡಿದುಕೊಂಡು ಹೊಡೆದರು. ನಾನು ಎಲ್ಲಿಯೂ ಹೋಗಲಿಲ್ಲ. ನಾನು ತುಂಬು ಗರ್ಭಿಣಿಯಾದಾಗ ತಾಳಲಾರದ ಹೊಟ್ಟೆ ನೋವು ಶುರುವಾಯಿತು. ತಾರೀಕು 21-8-86 ರಂದು ಗುರುವಾರ ಸುಮಾರು 3 ಗಂಟೆ ಸಮಯವಿರಬಹುದು. ಹೊಟ್ಟೆ ನೋವು ತಡೆಯಲಾರದೆ ಯಾರ ಯಾರನ್ನೋ ಕೂಗಿಕೊಂಡೆ. ನನ್ನ ಸಹಾಯಕ್ಕೆ ಯಾರೂ ಬರಲಿಲ್ಲ. ನನಗೆ ದಾಹ ಹೆಚ್ಚಾಯಿತು. ಸಮೀಪದಲ್ಲಿ ಶಿವಣ್ಣನವರ ಬಾವಿಯಿದೆ, ಬಾವಿಯ ತೊಟ್ಟಿಯಲ್ಲಿ ನೀರಿರಬೇಕೆಂದು ಅಲ್ಲಿಗೆ ಕಾರ್ಗತ್ತಲಲ್ಲಿಯೇ ಹೋದೆ. ಮುಂದೇನಾಯಿತು ನನಗೆ ಗೊತ್ತಿಲ್ಲ. ಆಮೇಲೆ ನಾನೆಲ್ಲಿದ್ದೇನೆ ಎಂದು ನೆನಪಾಯಿತು. ನನ್ನ ಹೊಟ್ಟೆಯ ಭಾರ ಕಮ್ಮಿಯಾಗಿತ್ತು. ಮಗುವನ್ನು ಬಾರಾಡಿದೆ. ನನ್ನ ದುರಾದೃಷ್ಟಕ್ಕೆ ನೀರು ಕಮ್ಮಿಯಿತ್ತು. ಮಗು ನೀರಿನಲ್ಲೆ ತೇಲುತ್ತಿತ್ತು. ಮಗುವನ್ನು ಬಾರಾಡಿ ಎತ್ತಿಕೊಂಡು ನೋಡಿದೆ. ಮಗು ಜೀವಂತವಾಗಿತ್ತು. ಬೆಳಗಾಗುವ ತನಕ ರಾತ್ರಿಯನ್ನು ಬಾವಿಯಲ್ಲೆ ಕಳೆದೆನು. ಮಗುವನ್ನು ಎತ್ತಿಕೊಂಡು ನಿಂತುಕೊಂಡೆ. ಬೆಳಗಾಯಿತು, ಬಾವಿಯ ಮಾಲಿಕರು ಬಂದು ನನ್ನನ್ನು ಹೊರತೆಗೆದರು.

ನನಗಾಗಿರುವ ಅನ್ಯಾಯಕ್ಕೆ ಯಾರಾದರೂ ನ್ಯಾಯ ದೊರಕಿಸಿ ಕೊಡುವರೆಂದು ಮಗುವಿಗಾಗಿ ಬದುಕಿ ಉಳಿದಿದ್ದೇನೆ. ಇಲ್ಲಿನ ಅಂಗಡಿ ಹೋಟೆಲಿನವರೇ ನನಗೆ ತಂದೆ ತಾಯಿಗಳಂತೆ ಬ್ರೆಡ್, ಹಾಲು, ಗಂಜಿಗಳನ್ನು ಕೊಡುತ್ತಿದ್ದಾರೆ. ಆದರೂ ನನಗೆ ನ್ಯಾಯ ಸಿಕ್ಕಿಲ್ಲ. ●

● ಈರಮ್ಮ, ಕಳ್ಳಿಪಾಳ್ಯ

# ಗುರಿ ಮತ್ತು ದಾರಿ



ಮಾರ್ಚ್ 22 ರಿಂದ 26ರವರೆಗೆ ಚಿಕ್ಕಮಗಳೂರು ಜಿಲ್ಲೆಯ ಕೆಮ್ಮಣ್ಣು ಗುಂಡಿಯಲ್ಲಿ ಐದು ದಿನಗಳ ಕಾಲ ರಾಜ್ಯಮಟ್ಟದ ಕಾರ್ಯಕರ್ತರ ಶಿಬಿರ ನಡೆಯಿತು. ಆ ಶಿಬಿರದಲ್ಲಿ ಮಂಡಿಸಲಾದ ಪ್ರಬಂಧ ಇದು.

ಆ ಶಿಬಿರದಲ್ಲಿ ಮಂಡಿಸಲಾದ ಪ್ರಬಂಧಗಳನ್ನು ಆಗಾಗ 'ಪಂಚಮ' ದಲ್ಲಿ ಪ್ರಕಟಿಸಲಾಗುವುದು.

ಈ ಕುರಿತು ಓದುಗರು/ಕಾರ್ಯಕರ್ತರು ಮುಕ್ತ ಚರ್ಚೆ ನಡೆಸಲು ಆಹ್ವಾನಿಸುತ್ತೇವೆ.

● ಎನ್. ಎಸ್. ಶಂಕರ್

ಯಾವುದೇ ಚಳವಳಿಯ ಗುರಿ ಮತ್ತು ದಾರಿಗೆ ಸಂಬಂಧಪಟ್ಟಂತೆ ಎರಡು ವಾದಗಳಿವೆ.

1 ಎಲ್ಲರ ಒಳಿತನ್ನು ದೃಷ್ಟಿಯಲ್ಲಿಟ್ಟುಕೊಂಡ ಉದಾತ್ತ ಗುರಿ ನಮ್ಮದಾದರೆ, ಆ ಗುರಿಸಾಧನೆಗೆ ನಾವೇನು ಮಾಡಿದರೂ ತಪ್ಪಲ್ಲ.

2 ಇಲ್ಲ, ಉದಾತ್ತ ಗುರಿಯನ್ನು ತಪ್ಪು ದಾರಿಗಳ ಮೂಲಕ ತಲುಪಲು ಸಾಧ್ಯವಿಲ್ಲ. ಗುರಿ ಮತ್ತು ದಾರಿಗೆ ಪರಸ್ಪರ ಅನ್ಯೋನ್ಯ ಸಂಬಂಧವಿದೆ. ನಮ್ಮ ಗುರಿಯ ಸಾಧನೆ, ನಾವು ತುಳಿಯುವ ದಾರಿಯನ್ನು ಅವಲಂಬಿಸಿದೆ.

ಈಗ ನಮ್ಮ ಮುಂದಿರುವ ಪ್ರಶ್ನೆ- ಇವೆರಡರಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳುವುದು.
ಈ ಎರಡು ವಾದಗಳ ಸುತ್ತಲೇ ಎಲ್ಲ ಚಳವಳಿಗಳೂ ಎಲ್ಲ ಸಿದ್ಧಾಂತಗಳೂ ಹೆಣೆದುಕೊಂಡಿವೆ.

ಕಮ್ಯೂನಿಸಮ್‌ನಂಥ ಸಿದ್ಧಾಂತ- ಅಯ್ಯಾ, ನಮ್ಮ ಗುರಿ ಉದಾತ್ತವಾದದ್ದಿದೆ. ನಾಳೆ ನಾವು ಕಟ್ಟುವ ಸಮಾಜದಲ್ಲಿ ಯಾರೂ ಮೇಲಿಲ್ಲ. ಕೀಳಿಲ್ಲ. ಎಲ್ಲರೂ ಸಮಾನರು. ಎಲ್ಲರೂ ಸಮೃದ್ಧರಾಗಿರುತ್ತಾರೆ. ಬಡತನ ವಿಲ್ಲ. ದುಃಖವಿಲ್ಲ. ಅಂಥ ಗುರಿ ನಮ್ಮದಾಗಿದ್ದ ಮೇಲೆ ಆ ಗುರಿ ತಲುಪಲು ನಾವು ಏನು ಮಾಡಿದರೇನು? ಎಲ್ಲವೂ ಸರಿಯೇ- ಅನ್ನುತ್ತದೆ. ಕೊಲೆಯಾಗಲೀ ದರೋಡೆಯಾಗಲೀ, ಯಾವುದೂ ತಪ್ಪಲ್ಲ, ಇವೆಲ್ಲಕ್ಕೂ ಆ ಉದಾತ್ತ ಗುರಿಯ ಸಮರ್ಥನೆಯಿದೆ- ಅನ್ನುವುದು ಈ ಸಿದ್ಧಾಂತದ ವಾದ.

ಇದಕ್ಕೆ ಪ್ರತಿಯಾಗಿ, ಗುರಿ ಎಂಥದ್ದೇ ಇರಲಿ ದಾರಿ ಉದಾತ್ತವಾಗಿರದಿದ್ದರೆ ಗುರಿ ಉದಾತ್ತವಾಗಿರಲು ಸಾಧ್ಯವೇ ಇಲ್ಲ. ಗುರಿ ಬೇರೆಯಲ್ಲ. ದಾರಿ ಬೇರೆಯಲ್ಲ. ನಾವು ಬಿತ್ತಿದಂತೆ ಬೆಳೆಯುತ್ತೇವೆ. ಬೇವಿನ ಬೀಜವ ಬಿತ್ತಿ ಸಿಹಿ ಹಣ್ಣಿನ ಫಲ ಪಡೆಯುವುದು ಆಗದ ಮಾತು; ಕೆಟ್ಟ ದಾರಿ ತಲುಪುವ ಗುರಿಯೂ ವಿಕೃತವಾಗಿ ಬಿಡುತ್ತದೆ- ಅನ್ನುವ ಸಿದ್ಧಾಂತವಿದೆ.

ಸಮಾನತೆ, ಸಮೃದ್ಧಿಗಳ ಒಳ್ಳೆಯ ವ್ಯವಸ್ಥೆ. ಎಂದರೆ, ಒಳ್ಳೆಯ ಮನಸ್ಸುಗಳಿಂದ ತುಂಬಿದ ವ್ಯವಸ್ಥೆ ಎಂದರ್ಥ. ಯಾವ ರೀತಿಯಲ್ಲಾದರೂ ಸರಿ, ಒಳ್ಳೆಯ ವ್ಯವಸ್ಥೆಯನ್ನು ಸೃಷ್ಟಿಸಿದರೆ ಸಾಕು. ಅಂಥ ಒಳ್ಳೆ ವ್ಯವಸ್ಥೆಯೇ ಒಳ್ಳೆಯ ಮನಸ್ಸುಗಳನ್ನು ಸೃಷ್ಟಿಸುತ್ತದೆ ಅನ್ನುವುದು ನಿಜವೋ?

ಅಥವಾ

ಒಳ್ಳೆಯ ಮನಸ್ಸುಗಳನ್ನು ಸೃಷ್ಟಿಸುವತ್ತಲೇ ಗಮನ ನೆಟ್ಟು, ಆ ದಾರಿಯ ಮೂಲಕವೇ ಒಳ್ಳೆಯ ವ್ಯವಸ್ಥೆಯ ಕನಸು ನನಸಾಗಲು ಸಾಧ್ಯ ಅನ್ನುವುದು ನಿಜವೋ?

ಈ ಪೈಕಿ, ನಮ್ಮ ಪ್ರತಿಯೊಂದು ನಡೆನುಡಿಯೂ ಒಳ್ಳೆಯ ಮನಸ್ಸುಗಳ ಸೃಷ್ಟಿಯಲ್ಲಿ ತೊಡಗಿದ್ದರೆ ಮಾತ್ರ ನಾವು ಒಳ್ಳೆಯ ವ್ಯವಸ್ಥೆಯನ್ನು ಹುಟ್ಟುಹಾಕಲು ಸಾಧ್ಯವೆಂದು ನಾನು ನಂಬಿದ್ದೇನೆ. ನನ್ನ ಇಡೀ ವಾದ ಈ ಆಯ್ಕೆಯನ್ನು ಸಮರ್ಥಿಸುವುದೇ ಆಗಿದೆ ಮತ್ತು ಈ ನಿಟ್ಟಿನಲ್ಲಿ ವ್ಯಾಪಕ ಚರ್ಚೆಯಾಗಲಿ ಎಂಬ ಹಂಬಲ ನನ್ನದು.

ಅಸಮಾನತೆಯಿರುವ ಯಾವುದೇ ಸಮಾಜದಲ್ಲಿ ಹಿಂಸೆ ಅಂತರ್ಗತವಾಗಿರುತ್ತದೆ. ಜಾತಿಯಾಗಲೀ, ಹಣ ಕಾಸಿನ ಏರುಪೇರಿರುವ ವರ್ಗಗಳ ಅಸಮಾನತೆಯಾಗಲಿ, ಅಥವಾ ಗಂಡು-ಹೆಣ್ಣಿನ ಲಿಂಗಭೇದವೇ ಆಗಲಿ ಇವೆಲ್ಲವೂ ಹಿಂಸೆಯ ವಿವಿಧ ರೂಪಗಳು. ಒಂದು ಜೀವಿಗಿಂತ ಇನ್ನೊಂದು ಜೀವಿ ಮೇಲು ಅಥವಾ ಕೀಳು ಅನ್ನುವುದೇ ಹಿಂಸೆಯ ಶೋಷಣೆಯ, ದಬ್ಬಾಳಿಕೆಯ ಮನೋಧರ್ಮ. ಹಿಂಸೆಯ ಹುಟ್ಟು ಇರುವುದೇ ಅಸಮಾನತೆಯಲ್ಲಿ. ಹೀಗೆ ಅಸಮಾನತೆಯಲ್ಲಿ ಹುಟ್ಟುವ ಹಿಂಸೆ, ಅಸಮಾನತೆಯಲ್ಲೇ ಬೆಳೆದು, ವ್ಯವಸ್ಥೆಯ ಮನೋಧರ್ಮವಾಗುತ್ತದೆ ಮತ್ತು ಅಸಮಾನತೆಯನ್ನೇ ಬೆಳೆಸುತ್ತದೆ.

ನಾವು ಸಮಾನತೆಯ ಸಮಾಜವ್ಯವಸ್ಥೆಯನ್ನು ಆದರ್ಶವಾಗಿ ಇಟ್ಟುಕೊಂಡಿರುವುದೇ ಆದರೆ, ಹಿಂಸೆಗೆ ಆಸ್ಪದವೇ ಇಲ್ಲದ ವ್ಯವಸ್ಥೆ ಕಟ್ಟಬೇಕು ಎಂದೇ ಅರ್ಥ.

ಈಗಿನ ಪ್ರಶ್ನೆಯೆಂದರೆ -ಅಹಿಂಸಾತ್ಮಕವಾದ ಸಮಾಜವನ್ನು ಕಟ್ಟಲು ಹಿಂಸೆಯ ದಾರಿ ಹಿಡಿಯಬೇಕೋ ಅಥವಾ ಅಹಿಂಸಾತ್ಮಕಮಾರ್ಗವೇ ಸೂಕ್ತವೋ.

ಹಿಂಸೆ-ಹೆದರಿಕೆಯನ್ನು ಹುಟ್ಟಿಸುತ್ತದೆ. ಹೆದರಿಕೆಯಿರುವಲ್ಲಿ ಸಮಾನತೆ ಸಾಧ್ಯವಿಲ್ಲ. ಇಂಥ ಹೆದರಿಕೆ ಪ್ರತಿ ಹಿಂಸೆಯನ್ನು ಹುಟ್ಟುಹಾಕುತ್ತದೆ. ಇದೊಂದು

ವಿಷಚಕ್ರ ಹಿಂಸೆ ಮತ್ತು ಪ್ರತಿಹಿಂಸೆ ಪರಸ್ಪರ ಅವಲಂಬಿಗಳು.

ಇದಕ್ಕೆ ಹಲವಾರು ಚಳವಳಿಗಳ ಉದಾಹರಣೆಯನ್ನು ನೋಡಬಹುದು.

ರಷ್ಯಾದೇಶವೂ ಸೇರಿದಂತೆ, ಎಲ್ಲೆಲ್ಲಿ ಹಿಂಸಾತ್ಮಕ ಚಳವಳಿಗಳ ಮೂಲಕ ಅಧಿಕಾರ ಪಡೆಯಲಾಗಿದೆಯೋ, ಅಲ್ಲೆಲ್ಲ ಆ ಅಧಿಕಾರವನ್ನು ಉಳಿಸಿಕೊಳ್ಳಲು ಮತ್ತೆ ಹಿಂಸೆ ಅನಿವಾರ್ಯವಾಗಿದೆ. ಅಂಥ ಹಿಂಸೆಯ ಊರುಗೋಲಿನ ಮೇಲೆ ನಿಂತ ಅಧಿಕಾರ –ನಿರಂಕುಶ ಸರ್ವಾಧಿಕಾರವಾಗದೆ ಬೇರೇನೂ ಆಗಲು ಸಾಧ್ಯವಿಲ್ಲ ಅನ್ನುವುದಕ್ಕೆ ಸ್ವತಃ ಸ್ಟಾಲಿನ್ ಸಾಕ್ಷಿಯಾಗಿದ್ದಾನೆ.

ಹಿಂಸೆಯ ಮಾರ್ಗ, ಕೊನೆಯಿಲ್ಲದ ಹಿಂಸಾ ಪರಂಪರೆಯನ್ನೇ ಶುರುಮಾಡುತ್ತದೆ. ಮನುಷ್ಯ ಸ್ವಭಾವಗಳ ದೃಷ್ಟಿಯಿಂದ ನೋಡುವುದಾದರೆ–ಅಪರಾಧ ಪ್ರಜ್ಞೆಯಿಲ್ಲದೆ ಯಾರೊಬ್ಬರೂ ಹಿಂಸಾಕೃತ್ಯದಲ್ಲಿ ತೊಡಗಲು ಸಾಧ್ಯವಿಲ್ಲ. ಯಾವ ಪಾಪ ಪ್ರಜ್ಞೆಯೂ ಇಲ್ಲದೆ ಒಂದು ಕೊಲೆ ಮಾಡಲು ಸಾಧ್ಯ ಎಂದು ನಿಮ್ಮಲ್ಲಿ ಯಾರಿಗಾದರೂ ಅನಿಸುವುದೇ?

ಅನ್ಯಾಯ ಮತ್ತು ಅಸತ್ಯಗಳ ಎದೆಯಲ್ಲಿ ಪಾಪ ಪ್ರಜ್ಞೆಯನ್ನುಹುಟ್ಟಿಸಿ ತಲೆ ತಗ್ಗಿಸುವಂತೆ ಮಾಡುವ ಮೂಲಕ ಅನ್ಯಾಯ ಅಸತ್ಯಗಳ ಬಲಕುಂದಿಸುವುದೆ ಯಾವುದೇ ಚಳವಳಿಯ ಗುರಿತಾನೇ? ಅಂಥ ಚಳವಳಿಯೇ ಸ್ವತಃ ತನ್ನ ಅಂತರಾಳದಲ್ಲಿ ಹಿಂಸೆಯ ಅಪರಾಧಿ ಭಾವವನ್ನು ಹುಟ್ಟಿಸಿ ಬೆಳೆಸುತ್ತಾನಡೆದರೆ-ಮತ್ತು ಈ ಅಪರಾಧಿಭಾವದ ನೇತಾರರೇ ನಾಳಿನ ವ್ಯವಸ್ಥೆಯ ನಾಯಕರು ಎಂದಾದರೆ–ಅದು ಒಳ್ಳೆಯ ವ್ಯವಸ್ಥೆಯಾದೀತೇ? ಯೋಚಿಸಬೇಕು.

ಆಕಸ್ಮಾತ್ ನಮ್ಮ ಗುರಿಯ ಉದಾತ್ತತೆ, ನಮ್ಮ ಅಪರಾಧಪ್ರಜ್ಞೆಯನ್ನೂ ಕೊಂದುಹಾಕಿಬಿಟ್ಟರೆ, ಅಂದರೆ ಕೊಲೆ ಮಾಡಿದರೂ ತಪ್ಪಿಲ್ಲ ಅನಿಸಿಬಿಟ್ಟರೆ-ಹೋರಾಟ ಯಾವುದು ,ಕೊಲೆಗಡುಕತನ ಯಾವುದು, ಹೇಳಲಾಗದ ಸ್ಥಿತಿ ಬಂದುಬಿಡುತ್ತದೆ. ಇಂಥ ಬೀಜದಿಂದ ಹುಟ್ಟಿದ ವ್ಯವಸ್ಥೆಯೂ ಕೊಲೆಗಡುಕ ಹೆಮ್ಮರವೇ ಆಗುತ್ತದೆ.

ನೋಡಿ–ಹಿಂಸೆ ಮತ್ತು ಪಿತೂರಿಯನ್ನು ತನ್ನ ಸಿದ್ಧಾಂತದ ಭಾಗವಾಗಿಸಿಕೊಂಡಿದ್ದ ರಷ್ಯಾ ಮತ್ತು ಚೀನಾದೇಶಗಳ ಕ್ರಾಂತಿ,ಕಡೆಗೆಕೊನೆಗೊಂಡ ರೀತಿನಮ್ಮ ಕಣ್ಣಮುಂದಿದೆ. ಅಧಿಕಾರಕ್ಕೆ ಬಂದ ಸ್ಟಾಲಿನ್ -ರಷ್ಯಾದಲ್ಲಿ ಸ್ಥಾಪಿಸಿದ್ದು ಹಿಂಸಾತ್ಮಕವಾದ ಜಾತಿ ವ್ಯವಸ್ಥೆಯನ್ನೇ. ಎಲ್ಲರಿಗೂ ನಿಗದಿತ ಸ್ಥಾನಮಾನ. ಅಲ್ಲಿಂದ ಅಲ್ಲಾಡಲಾಗದ ಸ್ಥಿತಿ! ಜಾತಿಯ ತಿರುಳೇ ಇಂಥ ನಿಶ್ಚಲ ಸ್ಥಾನಮಾನ ತಾನೇ? ಜೊತೆಗೆ ನಿಷ್ಠಾವಂತರಾಗಿದ್ದ ಸಾವಿರಾರು ಕಮ್ಯುನಿಸ್ಟರು ದನಿ ಎತ್ತಿದ್ದೇ ತಡ, ಪಿತೂರಿಯ ಆರೋಪದ ಮೇಲೆ ಮರಣದಂಡನೆಗೆ ಗುರಿಯಾದರು ಇಂದಿಗೆ ರಷ್ಯಾದ "ಕರೆಕ್ಷನ್ ಕ್ಯಾಂಪು" ಗಳಲ್ಲಿ, ಸೈಬೀರಿಯಾದ ಮರುಭೂಮಿಯಲ್ಲಿ ಕೊಳೆಯುತ್ತಿರುವವರೇ – ಆ ವ್ಯವಸ್ಥೆಯ 'ಅಸ್ಪೃಶ್ಯರು!'

ಅಲ್ಲೂ ಅಷ್ಟೇ. ಚೀನಾದಲ್ಲೂ ಅಷ್ಟೇ. ಒಬ್ಬರಾದ ಮೇಲೊಬ್ಬರು ರಾಷ್ಟ್ರನಾಯಕರು ತಮ್ಮ ಜೊತೆಗಾರರಿಂದಲೇ ಕೊಲೆಗೀಡಾದರು.

ಅದೇ ಅತ್ಯುನ್ನತ ಕ್ರಾಂತಿ ಎಂದು ಕೊಂಡಾಡುತ್ತಿದ್ದ ಕಮ್ಯುನಿಸ್ಟರು ಈಗ "ಕ್ರಾಂತಿ ಅವಿರತವಾದದ್ದು. ರಷ್ಯಾದಲ್ಲೂ ಕ್ರಾಂತಿ ಪೂರ್ಣಗೊಂಡಿಲ್ಲ. 1917ರಲ್ಲಿ ಆಗಿದ್ದು ಮೊದಲ ಹಂತ. ಎರಡನೇ ಹಂತದ ಕ್ರಾಂತಿಯಲ್ಲಿ ಎಲ್ಲವೂ ಸರಿಯಾಗುತ್ತದೆ." ಎಂಬ ಸಮರ್ಥನೆ ಕೊಡತೊಡಗಿದ್ದಾರೆ.

ಕ್ರಾಂತಿ ಅವಿರತವಾದದ್ದು ನಿಜವೇ. ಆದರೆ ಕೊಲೆಗೆ, ನಾಳಿನ ಸ್ವರ್ಗದ ಸಮರ್ಥನೆ ನಾಳಿನ ಸುಳ್ಳಿಗೆ ನಾಡಿದ್ದಿನ ಸಮೃದ್ಧಿಯ ಸಮರ್ಥನೆ... ಗುರಿಗೂ ದಾರಿಗೂ ಸಂಬಂಧವಿಲ್ಲ ಅನ್ನುವವರು-ಆ ಎಂದೂ ಬಾರದ ನಾಳೆಗಾಗಿ ಕಾಯುತ್ತಲೇ ಇದ್ದಾರೆ...

ಅದಕ್ಕೇ, ನಮ್ಮ ಪ್ರತಿಯೊಂದು ನಡೆ -ನುಡಿಗೂ. ಎಲ್ಲೋ ಮರೀಚಿಕೆಯಂತೆ ಕಂಡೂ ಕಾಣದೆ ಕಾಡಿಸುವ ಗುರಿಯೆಂಬ ಮಾಯೆ ಸಮರ್ಥನೆಯಾಗಬಾರದು. ಇಂದಿನ ಆ ಕೃತಿಗೆ ಆ ಕೃತಿಯೇ ಸಮರ್ಥನೆಯಾಗಬೇಕು. ಅಂದರೆ ನೈತಿಕವಾಗಿ ಸಮರ್ಥನೀಯವಾಗಿರಭೇಕು.

ಸತ್ಯಕ್ಕೆ ಸತ್ಯವೇ ಹಾದಿ. ಅಹಿಂಸೆಗೆ ಅಹಿಂಸೆಯೇ ಮಾರ್ಗ...ಬಿತ್ತಿದಂತೆ ಬೆಳೆ. ಯೇಸುಕ್ರಿಸ್ತನಿಂದ ಹಿಡಿದು ಬುದ್ಧ, ಬಸವ, ಗಾಂಧಿಯವರೆಗೆ ಎಲ್ಲರೂ ಹೇಳಿದ್ದು ಇದೇ ಮಾರ್ಗವನ್ನು. 'ಬಿತ್ತಿದಂತೆ ಬೆಳೆ' ಎಂಬ ಗಾದೆ ಹೇಳಿದ ನಮ್ಮ ಜಾನಪದ ವಿವೇಕದ ಸಾರವೂ ಇದೇ.

## ಗಂಡು–ಹೆಣ್ಣು

ಭಾರತಕ್ಕೆ ಅತ್ಯಂತ ವಿಶಿಷ್ಟವಾದ ಈ ಜಾತಿ ಪದ್ಧತಿಯ ಮೂಲವೇನು?

ಅನೇಕ ಚರಿತ್ರಕಾರರು ಮತ್ತು ಸಂಶೋಧಕರು-ಗಂಡು ಹೆಣ್ಣಿನ ನಡುವಣ ಅಸಮಾನತೆಯೇ ಜಾತಿ ವ್ಯವಸ್ಥೆಗೂ ಮೂಲ ಎಂದು ವಾದಿಸಿದ್ದಾರೆ. ಒಂದು ರೀತಿಯಲ್ಲಿ ಜಾತಿಗಿಂತಲೂ ಗಂಡು ಹೆಣ್ಣಿನ ಸಂಬಂಧದ ವಿಷಮತೆ ಹೆಚ್ಚು ಜಟಿಲವಾದದ್ದು ಮತ್ತು ಸಂಕೀರ್ಣವಾದದ್ದು.

ಜಾತಿಯ ವಿಷಯದಲ್ಲಾದರೆ, ಈ ಸಮಾಜ ಮನುಷ್ಯರನ್ನು ಒಡೆದು ಜಾತಿಗಳಾಗಿ ಬೇರೆ ಮಾಡಿಟ್ಟಿದೆ. ಅದೇ ಸಮಾಜ ಗಂಡು ಹೆಣ್ಣನ್ನು ಬೇರೆ ಮಾಡಿಟ್ಟಿದ್ದರೂ, ನಿಸರ್ಗ ಅವರನ್ನು ಒಂದು ಮಾಡುತ್ತಲೇ ಇರುತ್ತದೆ. ಈ ಸಂಬಂಧದ ಅನಿವಾರ್ಯತೆ ಮತ್ತು ವೈಷಮ್ಯ–ಗಂಡು-ಹೆಣ್ಣು ಇಬ್ಬರ ಸತ್ವವನ್ನೂ ಹೀರುತ್ತಿದೆ...

ಹೆಣ್ಣು ಈ ಸಮಾಜದಲ್ಲಿ ಶೋಷಿತೆ, "ಅಬಲೆ". ಇದರಲ್ಲಿ ಯಾರಿಗೂ ಅನುಮಾನವಿಲ್ಲ.

ಶೋಷಿತರು, ತಮ್ಮ ವಿಮೋಚನೆಗಾಗಿ ತಾವೇ ಮುಂದಾಗಿ ತಾವೇ ಹೋರಾಟ ಮಾಡಬೇಕೇ ಹೊರತು, ಬೇರೆಯವರಿಂದ ಅದು ಸಾಧ್ಯವಿಲ್ಲ ಎಂದು

# ಕಳೆದು ಹೋದ ಗೆಳೆಯರು

ಅವರು
ತಮ್ಮ ಕಪ್ಪು ಸೂಟುಗಳಲ್ಲಿ
ಹವಾನಿಯಂತ್ರಿತ ಕಛೇರಿಯಲ್ಲಿ
ಬಂಧಿತರಾಗಿರುವರು.
ಸುರಿವ ಜೊಲ್ಲಿನಿಂದ ಒದ್ದೆಯಾದ ಬಾಗಿಲಲಿ
ರೆಡಿನಿಂತ ಅಲ್ಸೇಶಿಯನ್ ನಾಯಿಗಳು.

ಅವರು
ರಾತ್ರಿಗಳನ್ನು ಬಾನುಮೋಟಾರುಗಳಲ್ಲಿ
ಕಳೆಯುತ್ತಾ, ತಾವೆಷ್ಟು ಧೈರ್ಯಶಾಲಿಗಳು
ಎಂದು ಪ್ರದರ್ಶಿಸಲು ಅವನ್ನು
ಆಕಾಶದಲ್ಲೇ ಬದಲಿಸುತ್ತಾರೆ.

ತಮ್ಮಬಾಲತಾವೇ ತಿರುಗಿಹಿಡಿಯಲು ಸೋತು
ತಲೆಗಿರ್ರೆನ್ನುವ ಅಮಲು ಆವರಿಸಿ
ತಮ್ಮ ಉಗುರನ್ನ ಯಾವಾಗ ಕಚ್ಚಬಾರದು
ಎಂದರಿತಂತೆ ತೋರುವುದಿಲ್ಲ.

ಹೊಸ ಚಟಗಳು ಅವರ
ಪಿತ್ತಕೋಶಗಳ ಸುತ್ತುವರೆದಿವೆ.
ತಮ್ಮ ತಳ ತಲುಪುತ್ತಿದ್ದಾರೆ.
ತಲುಪುವುದು ಸೊಗಸಾಗಿದೆ,
ಕನಸುಗಾರರಿಗೆ ಅವರ ಬಳಿ ಸಮಯವಿಲ್ಲ.



ಮೂಲ: ಲೆನ್ರಿ ಪೀಟರ್ಸ್
ಕನ್ನಡಕ್ಕೆ: ಜಿ. ಕೆ. ಕೃಷ್ಣ

ಕಾರ್ಲ್‌ಮಾರ್ಕ್ಸ್ ಆದಿಯಾಗಿ ಡಾ॥ ಅಂಬೇಡ್ಕರ್ ವರೆಗೆ ಎಲ್ಲರೂ ಸಾರಿ ಸಾರಿ ಹೇಳಿದ್ದಾರೆ.

ಹೆಣ್ಣು ಶೋಷಿತೆಯಾದ್ದರಿಂದ, ಹೆಣ್ಣಿನ ವಿಮೋಚನೆ ಹೆಣ್ಣಿನಿಂದ ಮಾತ್ರ ಸಾಧ್ಯ. ಅಂದ ಮೇಲೆ ಹೆಣ್ಣು ತನ್ನ ಹೋರಾಟದಲ್ಲಿ ಎಂಥ ಆಯ್ಕೆ ಮಾಡಿಕೊಳ್ಳಬೇಕು? ಹಿಂಸಾತ್ಮಕ ಮಾರ್ಗವೋ ಅಥವಾ ಅಹಿಂಸಾತ್ಮಕ ಮಾರ್ಗವೋ?

ಹಿಂಸಾತ್ಮಕವೆಂದರೆ–ಶೋಷಕ ವರ್ಗವಾದ ಇಡೀ ಗಂಡುಕುಲವನ್ನೇ ನಿರ್ನಾಮ ಮಾಡಿಬಿಡಬೇಕು ಎಂದಾಗುತ್ತದೆ! ಆ ಮೂಲಕ ಪರಿಹಾರ ಸಿಕ್ಕೀತೇ? ಇದನ್ನು ಯೋಚಿಸಬೇಕು.

ಏಕೆಂದರೆ ಜಾತಿ ಮೂಲ ಕ್ರೌರ್ಯ ಮತ್ತು ಗಂಡು ಹೆಣ್ಣಿನ ಅಸಮಾನತೆಗೆ ನೇರವಾದ ಸಂಬಂಧ ಇದೆ. ಅಷ್ಟೇ ಅಲ್ಲ, ಹೆಣ್ಣಿನ ಸಮಸ್ಯೆಗಳ ಪರಿಹಾರದಲ್ಲೇ ಇಡೀ ಸಮಾಜದ ರೋಗಗಳಿಗೆ ಮದ್ದು ಇದೆ ಎಂದೇ ನನಗನಿಸುತ್ತದೆ.

ಹೆಣ್ತನವೆನ್ನುವುದು ಮನುಕುಲಕ್ಕೆ ಕೊಟ್ಟಿರುವ ಮಹತ್ತರ ಕಾಣಿಕೆಗಳು ಎರಡು. ಒಂದು ತಾಯಿ ಹೃದಯ. ಇನ್ನೊಂದು ಅಹಿಂಸಾತ್ಮಕವಾದ, ಶುದ್ಧ ನೈತಿಕತೆಯ ಸತ್ಯಾಗ್ರಹ.

ನೈತಿಕತೆ–ಒಬ್ಬ ಮನುಷ್ಯ, ಇನ್ನೊಬ್ಬ ಮನುಷ್ಯನಿಗೆ ತೋರುವ ಪ್ರೀತಿ ಮತ್ತು ಗೌರವ. ಒಬ್ಬನ ಹಕ್ಕನ್ನು ಇನ್ನೊಬ್ಬ ಕಸಿಯದ ಸ್ವಯಂಪ್ರೇರಿತ ಕಟ್ಟುಪಾಡು. ಈ ನೈತಿಕತೆಗೂ ಸತ್ಯಾಗ್ರಹಕ್ಕೂ ಮತ್ತು ನೈತಿಕತೆಗೂ ತಾಯಿ ಹೃದಯಕ್ಕೂ ಇರುವ ಸಂಬಂಧವನ್ನೂ ನೋಡಬಹುದು.

ಸಮಾನತೆ ಮನುಷ್ಯನ, ಎಲ್ಲ ಜೀವಿಗಳ, ಮೂಲಭೂತ ಹಕ್ಕು. ಯಾಕೆಂದರೆ-ಮೂಲತಃ ಜೀವಿಗಳೆಲ್ಲರೂ, ಮನುಷ್ಯರೆಲ್ಲರೂ ಒಂದೇ. ಎಲ್ಲ ಮನುಷ್ಯರೂ ಒಳಿತು-ಕೆಡಕುಗಳ ಸಂಗಮ. ಎಲ್ಲರೂ ತಪ್ಪು ಮಾಡುತ್ತಾರೆ ಮತ್ತು ಬಹುಪಾಲು ತಪ್ಪುಗಳನ್ನು ತಮಗರಿವಿಲ್ಲದೆ, ವ್ಯವಸ್ಥೆಯ ಒತ್ತಡದಿಂದಲೇ ಮಾಡುತ್ತಾರೆ. ತಾಯಿ ಹೃದಯದ ಪ್ರೇಮಪೂರ್ಣ ಅನುಕಂಪ-ಈ ತಪ್ಪುಗಳ ಮೂಲವಾದ ವ್ಯವಸ್ಥೆಯನ್ನು ಮತ್ತು ಅಜ್ಞಾನವನ್ನು ಮನಗಾಣುತ್ತದೆ. ನೈತಿಕವಾದ ಸತ್ಯಾಗ್ರಹ ಆ ಅಜ್ಞಾನವನ್ನು ಮತ್ತು ತಪ್ಪನ್ನು ಸಹಾನುಭೂತಿಯಿಂದ ತಿದ್ದಬಯಸುತ್ತದೆ. ತಪ್ಪು ಮಾಡಿದವನನ್ನೇ ದ್ವೇಷದಿಂದ ಮುಗಿಸಿಬಿಡುವುದರಲ್ಲಿ ಪರಿಹಾರವಿಲ್ಲ ಅನ್ನುವುದನ್ನು ಅರ್ಥಮಾಡಿಕೊಳ್ಳುತ್ತದೆ.

ಇದರರ್ಥವಿಷ್ಟೇ. "ಒಂದು ದುಷ್ಟ ವ್ಯವಸ್ಥೆಗೆ ಬೇರೆಯವರಂತೆಯೇ ನನ್ನಲ್ಲಿನ ದುಷ್ಟತನವೂ ಕಾರಣ. ನನ್ನ ದುಷ್ಟತನದ ಜೊತೆಗೆ ಎಲ್ಲರ ದುಷ್ಟತನವನ್ನೂ ಹೋಗಲಾಡಿಸುವುದರಿಂದ ಮಾತ್ರ ಒಳ್ಳೆಯ ವ್ಯವಸ್ಥೆ ಸೃಷ್ಟಿಸಬಹುದು" ಎಂಬ ನಂಬಿಕೆಯಲ್ಲಿ ತಾಯಿ ಹೃದಯ ಮತ್ತು ನೈತಿಕ ಸತ್ಯಾಗ್ರಹ ಬೆರೆತಿರುತ್ತವೆ.

ನನ್ನಂತೆಯೇ ಅವನಲ್ಲವೇ? ಅವನ ಸ್ಥಿತಿಯಲ್ಲಿ ನಾನಿದ್ದರೆ ನಾನೇನು ಮಾಡುತ್ತಿದ್ದೆ? ಇಂಥ ಪ್ರಶ್ನೆಗಳೇ ನೈತಿಕ ಸತ್ಯಾಗ್ರಹದ ದಾರಿದೀಪವಾಗುತ್ತವೆ.

ಇದಕ್ಕೆ ಪ್ರತಿಯಾಗಿ ಹಿಂಸಾತ್ಮಕ ಮಾರ್ಗ–ಮೊದಲು ತನ್ನ "ವೈರಿ"ಗಳನ್ನು ಗುರುತಿಸಿಕೊಳ್ಳಬಹುದು. ಅದು ಬಂಡವಾಳಶಾಹಿಯೋ, ಭೂಮಾಲೀಕನೋ ಆಗಿರುವಂಥ ವರ್ಗವೈರಿಯಾಗಿರಬಹುದು ಅಥವಾ ಜಾತಿ ವೈರಿಯಾಗಿರಬಹುದು. ಅಂತೂ ತಪ್ಪು ನನ್ನಲ್ಲಿಲ್ಲ, ಅವನಲ್ಲಿದೆ ಅಂದುಕೊಳ್ಳುವುದೇ ಹಿಂಸಾತ್ಮಕ ಹೋರಾಟದ ಆರಂಭ. ಹೋರಾಟ ಮುಗಿದು, ವರ್ಗವೈರಿ ನಿರ್ನಾಮವಾಗಿರುತ್ತಾನೆ. ನಾನು ನನ್ನ ದುಷ್ಟತನದ ಸಮೇತ ಅಧಿಕಾರದಲ್ಲಿರುತ್ತೇನೆ...

ಈ ಸಾಧ್ಯತೆಯನ್ನೂ ಯೋಚಿಸಬೇಕು.

## ನಾಗರಿಕತೆ

ಬ್ರಿಟಿಷರು ನಮ್ಮ ನತದೃಷ್ಟ ದೇಶವನ್ನು ಆಳಿದರು, ಹೋದರು. ನಾವು ಸ್ವತಂತ್ರರಾದೆವು.

ಅವರೇನೋ ಹೋದರು. ಆದರೆ ಅವರ ಶಿಕ್ಷಣ ಪದ್ಧತಿ, ಅವರು ಬೆಳೆಸಿದ ಮಿಲಿಟರಿ, ಅವರು ರೂಪಿಸಿದ ಅರ್ಥವ್ಯವಸ್ಥೆ, ಕೊನೆಗೆ ಅವರ ಮಾದರಿ ಪ್ರಜಾಪ್ರಭುತ್ವ, ಅವರು ಬಿಟ್ಟು ಹೋದ ನಡೆ ನುಡಿ,

**"ಒಂದು ದುಷ್ಟ ವ್ಯವಸ್ಥೆಗೆ ಬೇರೆಯವರಂತೆಯೇ ನನ್ನಲ್ಲಿನ ದುಷ್ಟತನವೂ ಕಾರಣ, ನನ್ನ ದುಷ್ಟತನದ ಜೊತೆಗೆ ಎಲ್ಲರ ದುಷ್ಟತನವನ್ನೂ ಹೋಗಲಾಡಿಸುವುದರಿಂದ ಮಾತ್ರ ಒಳ್ಳೆಯ ವ್ಯವಸ್ಥೆ ಸೃಷ್ಟಿಸಬಹುದು" ಎಂಬ ನಂಬಿಕೆಯಲ್ಲಿ ತಾಯಿ ಹೃದಯ ಮತ್ತು ನೈತಿಕ ಸತ್ಯಾಗ್ರಹ ಬೆರೆತಿರುತ್ತವೆ.**

ಊಟ ಬಟ್ಟೆ-ಇವೆಲ್ಲವೂ ಇವೆ. ನಮ್ಮ ಸಂಪನ್ಮೂಲಗಳನ್ನು ತಮ್ಮ ದೇಶಕ್ಕೆ ವರ್ಗಾಯಿಸಿಕೊಳ್ಳಲು ಅನುಕೂಲವಾಗುವಂತೆ ಅವರು ಈ ದೇಶದಲ್ಲಿ ಕಟ್ಟಿಕೊಂಡ ವ್ಯವಸ್ಥೆಯನ್ನು ನಾವು ಬಾಚಿ ತಬ್ಬಿಕೊಂಡಿದ್ದೇವೆ. ನಾವೆಷ್ಟು ಸ್ವತಂತ್ರರು?

ಎರಡನೇ ಮಹಾಯುದ್ಧದ ಬಳಿಕ ಅವರ ಸ್ಥಾನದಲ್ಲಿ ಅಮೆರಿಕಾ ನಮ್ಮನ್ನು ಆಳುತ್ತಿದೆ. ಅಷ್ಟೇ ವ್ಯತ್ಯಾಸ.

ಈ ಆಡಳಿತ ನೇರವಾದದ್ದಲ್ಲ, ಸಾಂಸ್ಕೃತಿಕವಾದದ್ದು.

ಪಾಶ್ಚಾತ್ಯೀಕರಣದ ಮೂಲಕ (ಈಗಿನ ಸ್ಥಿತಿಯಲ್ಲಿ ಪಟ್ಟಣ ಸೇರಿ ಇಂಗ್ಲಿಷ್ ನಡೆ ನುಡಿ ಕಲಿತು, ಷೋಕಾದ ಬಟ್ಟೆ ಬರೆ ಧರಿಸುವ ಮೂಲಕ) ಜಾತಿಯನ್ನು ಮೀರಬಹುದು ಎಂದು ಆಧುನಿಕ ನಾಗರಿಕತೆ ಬೋಧಿಸಿದರೆ, ಸಂಸ್ಕೃತೀಕರಣದ ಮೂಲಕ (ಅಂದರೆ ಜಾತಿಶ್ರೇಣಿಯಲ್ಲಿ ಮೇಲಿನವರಾದ "ಉತ್ತಮರ" ಆಚಾರ ವಿಚಾರ ಅಳವಡಿಸಿಕೊಂಡು) ಜಾತಿಯನ್ನು ಮೀರಬಹುದು ಎಂದು ನಮ್ಮ ಸನಾತನ ವಾದಿ ಚಿಂತಕರು ಹೇಳುತ್ತಾರೆ.

. ಎರಡೂ ರೀತಿಯಲ್ಲಿ ನಾನು ನಾನೇ ಆಗಿರುವುದಿಲ್ಲ. ನನ್ನ ಸಂಸ್ಕೃತಿಯಲ್ಲಿ ಬೇರು ಬಿಟ್ಟು, ಸ್ವಾಭಿಮಾನ ಮತ್ತು ಆತ್ಮವಿಮರ್ಶೆಗಳ ಘನತೆಯ ಮಾನವನಾಗಿರುವುದಿಲ್ಲ. ಇನ್ನೊಂದಕ್ಕೆ, "ಮಾದರಿ"ಗೆ ನನ್ನನ್ನು ಅರ್ಪಿಸಿಕೊಂಡ ಕುಬ್ಜನಾಗಿರುತ್ತೇನೆ...

ನಮ್ಮ ನಾಗರಿಕತೆ ಒಡ್ಡುವ ಸಮಸ್ಯೆಗಳು.

ಇದನ್ನು ಎದುರಿಸಲೂ ನಮಗೆ ಗುರಿ-ದಾರಿಗಳ ಸ್ಪಷ್ಟ ಕಲ್ಪನೆಗಳಿರಬೇಕು.

ಆಧುನಿಕ ನಾಗರಿಕತೆಯ ಮುಖ್ಯ ಲಕ್ಷಣ–ಯಾಂತ್ರೀಕರಣ (ಇದಕ್ಕೂ ಮೀರಿದ ಅಂತರಾಷ್ಟ್ರೀಯ ಸಂಬಂಧಗಳ ಪ್ರಶ್ನೆಯೂ ಇಲ್ಲಿ ಅಡಕವಾಗಿದೆ. ಆದರೂ ಅದರ ಪ್ರಸ್ತಾಪಕ್ಕೆ ಇಲ್ಲಿ ಅವಕಾಶವಿಲ್ಲ.) ಯಾಂತ್ರೀಕರಣವೆಂದರೆ ಮನುಷ್ಯನ ನೇರ ದುಡಿಮೆಯ ಅಗತ್ಯವನ್ನು ಕಮ್ಮಿ ಮಾಡುವ; ಕಡೆಗೆ ದುಡಿಮೆಯನ್ನೇ ಇಲ್ಲವಾಗಿಸುವ ಗುರಿಯುಳ್ಳದ್ದು. ಇದರ ಹಿಂದೆ-"ದುಡಿಮೆ ಕೀಳಾದದ್ದು, ದುಡಿಮೆಯ ಮೂಲಕ ನೆಮ್ಮದಿ ಸಾಧ್ಯವಿಲ್ಲ" ಅನ್ನುವ ಇಂಗಿತವಿದೆ.

ಆದರೆ ಈ ಯಾಂತ್ರೀಕರಣದಿಂದ ಹುಟ್ಟಿದ ಕೇಂದ್ರೀಕೃತ ಅಧಿಕಾರ ವ್ಯವಸ್ಥೆಯಲ್ಲಿ ಮತ್ತು ಹಳ್ಳಿಗರ ಸಾರವನ್ನೆಲ್ಲ ಹಿಂಡಿಬಿಡುವ ನಗರ ಪಟ್ಟಣಗಳಲ್ಲಿ ಯಾರಾದರೂ ನೆಮ್ಮದಿಯಿಂದಿದ್ದಾರಾ ಎಂದು ಕೇಳಿ ನೋಡಿ.

ಈ ನಗರಗಳಲ್ಲಿ ಕೇವಲ ಬಸ್ ಕಾಯುವ, ಸಿಗ್ನಲ್ ದೀಪ ಕಾಯುವ, ಯಂತ್ರಗಳಲ್ಲಿ ಯಂತ್ರವಾಗುವ, ಫೈಲುಗಳಲ್ಲಿ ಹುಳುವಾಗುವ, ದೈನಂದಿನ ಚಟುವಟಿಕೆಯೇ, ನೆಮ್ಮದಿಯನ್ನು ಕೊಂದು ಉದ್ವೇಗ, ಅಭದ್ರತೆ, ಅಸಹಾಯಕತೆ ಮತ್ತು ಒಂಟಿತನಗಳನ್ನು ಹುಟ್ಟುಹಾಕುತ್ತದೆ ..

ಅದು ಹೋಗಲಿ. ದುಡಿಮೆಯೇ ನಮ್ಮ ಸಂಸ್ಕೃತಿಯ ಜೀವಾಳವಾಗಿರುವಾಗ, ನಮ್ಮ ಎಲ್ಲ ಕಲೆ, ಹಾಡು, ಹಸೆ-ದುಡಿಮೆಯ ಲಯದಿಂದಲೇ ಹುಟ್ಟಿರುವಾಗ, ದುಡಿಮೆಯನ್ನು ನಿರಾಕರಿಸುವ ಹಿಂದೂ ಧರ್ಮವಾಗಲೀ, ಯಂತ್ರ ನಾಗರಿಕತೆಯೇ ಆಗಲೀ, ನಮಗೆ ದಿಕ್ಕಾಗಬಲ್ಲವೇ?

ಇದು ಒಂದು ಸಂಸ್ಕೃತಿಗೆ ಎದುರುತ್ತರವಾಗಿ ಇನ್ನೊಂದು ಸಮರ್ಥ ಜೀವಂತ ಸಂಸ್ಕೃತಿಯನ್ನು ಕಟ್ಟುವ ಪ್ರಶ್ನೆ.

ಗುರಿ–ದಾರಿಗಳ ಸಂಬಂಧ ಅಡಗಿರುವುದೂ ಇಲ್ಲೇ. ದುಡಿಮೆ ದಲಿತಪಂತಿಕೆಯ ಪ್ರತೀಕ. ತಾಯಿ ಹೃದಯ ಮತ್ತು ನೈತಿಕ ಸತ್ಯಾಗ್ರಹ ಹೆಣ್ತನದ ಕೊಡುಗೆ.

ಈ ಎರಡೂ ಶೋಷಿತ ಸಂಸ್ಕೃತಿಗಳ ಆತ್ಮ ಬಲವನ್ನು ಬೆಸೆಯುವುದರಿಂದ ಇಡೀ ಮನುಕುಲದ ವಿಮೋಚನೆ ಸಾಧ್ಯ: ದುಡಿಮೆ, ತಾಯಿ ಹೃದಯ ಮತ್ತು ನೈತಿಕ ಸತ್ಯಾಗ್ರಹ–ಇವು ಮೂರೇ ಕಡೆಗೂ ನಮಗೆ ಬೆಳಕಾಗಬಲ್ಲ ಶಕ್ತಿಗಳು ಎಂದೇ ನಾನು ನಂಬಿದ್ದೇನೆ. ●



ಚಿಪ್ಪು ಮೀನು ಚಿಪ್ಪುಗಳನ್ನಗಲಿಸಿಕೊಂಡು ಹಾಯಾಗಿ ಬಿಸಿಲು ಕಾಸಿಕೊಳ್ಳುತ್ತಿತ್ತು.

ನೀರ್ಕೋಳಿ ಗಬಕ್ಕನೆ ಅದನ್ನು ಕುಕ್ಕಿ ಹಿಡಿಯಿತು.

ಸರಕ್ಕನೆ ಚಿಪ್ಪುಗಳನ್ನು ಬಿಗಿಯಾಗಿ ಅದುಮಿ ನೀರ್ಕೋಳಿಯ ಕೊಕ್ಕನ್ನು ಚಿಪ್ಪಿನ ಇಕ್ಕಳದಲ್ಲಿ ಸಿಕ್ಕಿಸಿಕೊಂಡಿತು ಚಿಪ್ಪುಮೀನು.

ನೀರ್ಕೋಳಿ ಹೇಳಿತು 'ಇನ್ನೆರಡು ದಿನ ಮಳೆ ಬರದಿದ್ದರೆ ಸಾಕು. ಈ ಚಿಪ್ಪುಮೀನಿನ ಕತೆ ಮುಗಿದಂತೆಯೇ',

ಚಿಪ್ಪು ಮೀನು ಎಗರಾಡಿತು 'ಇವೊತ್ತು ನಾಳೆಯೊಳಗಾಗಿ ನಿನ್ನ ಕೊಕ್ಕನ್ನು ಬಿಡಿಸಿಕೊಳ್ಳಲಾಗದಿದ್ದರೆ ಇಲ್ಲೊಂದು ಸತ್ತು ಬಿದ್ದ ನೀರ್ಕೋಳಿಯನ್ನು ನೋಡಬಹುದು'.

ಹಿಡಿತವನ್ನು ಸಡಿಲಗೊಳಿಸಲು ನೀರ್ಕೋಳಿಯೂ ತಯಾರಿರಲಿಲ್ಲ; ಚಿಪ್ಪುಮೀನೂ ತಯಾರಿರಲಿಲ್ಲ.

ಆ ಹಾದಿಯಲ್ಲೇ ಬರುತ್ತಿದ್ದ ಬೆಸ್ತ ಎರಡನ್ನೂ ಮುರಿದು ಬುಟ್ಟಿಗೆ ತುಂಬಿದ;

**ಹೆಗಡೆ ಎಂಬ ಬೆಸ್ತನ ಕೈಗೆ ಸಿಕ್ಕಿದ ಹಾವನೂರ್ ಆಯೋಗ ಹಾಗೂ ವೆಂಕಟಸ್ವಾಮಿ ಆಯೋಗಗಳ ಕಥೆ.**

## ಕ್ರಾಂತಿ ಮತ್ತು ಮೊಳಕೆ

ಒಬ್ಬ ವ್ಯಕ್ತಿಗೆ ತನ್ನ ಹೊಲದ ಪೈರಿನ ಮೊಳಕೆಗಳು ಬೇಗ ಬೆಳೆಯುತ್ತಿಲ್ಲವೆಂದೆನಿಸಿತು.

ಬೇಗ ಬೆಳೆಯಲು ಅದಕ್ಕೆ ಸಹಾಯಮಾಡಬೇಕೆಂದುಕೊಂಡು ಆ ವ್ಯಕ್ತಿ ಒಂದೊಂದು ಮೊಳಕೆಯನ್ನೂ ಮಣ್ಣಿನಿಂದ ತುಸು ಮೇಲೆಳೆದ. ಹೀಗೆ ಕೆಲಸಮಾಡಿ ದಣಿದವನೆ ಮನೆಗೆ ವಾಪಸ್ಸಾದ.

"ಈದಿನ ನನಗೆ ಬಹಳ ಆಯಾಸವಾಗಿದೆ" ಮನೆಯವರಿಗೆಲ್ಲಾ ಹೇಳಿದ. 'ಇಷ್ಟೂ ಹೊತ್ತು ಮೊಳಕೆಗಳು ಬೇಗ ಬೆಳೆಯಲು ಸಹಾಯ ಮಾಡುತ್ತಿದ್ದೆ'

ಇದನ್ನು ಕೇಳಿದ ತಮ್ಮ ಹೊಲದ ಕಡೆಗೆ ಓಡಿದ.



ಅಲ್ಲಿ ನೋಡುವಾಗ ಮೊಳಕೆಗಳೆಲ್ಲ ಬಾಡಿ ಸತ್ತುಬಿದ್ದಿದ್ದವು. ನಮ್ಮಲ್ಲಿ ಬಹಳಷ್ಟು ಮಂದಿಗೆ ಬೆಳೆಯುವ ಮೊಳಕೆಗಳಿಗೆ ಸಹಾಯ ಮಾಡಬೇಕೆಂಬ ಮನಸ್ಸೇನೋ ಇರುತ್ತದೆ. ಅದರಲ್ಲಿ ಕೆಲವರು, ಏನೇ ಮಾಡಿದರೂ ಉಪಯೋಗವಿಲ್ಲವೆಂದುಕೊಂಡು ಕಳೆ ತೆಗೆಯಲುಂ ಕೂಡ ಹೋಗುವುದಿಲ್ಲ. ಮತ್ತೆ ಕೆಲವರು ಮೊಳಕೆಯ ಸಹಜ ನೆಲೆಯಿಂದ ಮೇಲೆಳೆದು ಅದಕ್ಕೆ ಸಹಾಯಮಾಡಬಯಸುತ್ತಾರೆ, ಈ ಇಬ್ಬರಲ್ಲಿ ಮೊದಲನೆಯವರೇ ಕೊಂಚ ವಾಸಿ.

**ನಾಳೆಯೇ ಕ್ರಾಂತಿಯಾಗಬೇಕೆಂಬ ಆತುರಗಾರರು ನೊಳಕೆ ಕಿತ್ತ ಕಥೆ**

● ಸಂಗ್ರಹ : **ಕೇರಪ್ಪ**

## ಕ್ಯಾನ್ಸರ್ ಚಿಕಿತ್ಸೆಗೆ ನೆರವಾಗಿ

ಸಮಾನತೆ, ಸಹೋದರತೆಗಳ ಕನಸು ಕಂಡಿದ್ದ ದಲಿತ ಸಾಹಿತಿ, ಪ್ರಗತಿಪರ ವಿಚಾರವಾದಿ, ಚಿಂತನಶೀಲರಾದ ಬೋಳಬಂಡೆಪ್ಪ ಅವರು ರಾಯಚೂರು ಭಾಗದ ದಲಿತ ಸಂಘಟನೆಗೆ ಕಾರಣರಾದವರಲ್ಲಿ ಒಬ್ಬರು.

ಕಳೆದ ಆರು ತಿಂಗಳ ಹಿಂದೆ ಅವರಿಗೆ ರಕ್ತದ ಕ್ಯಾನ್ಸರ್ ಇರುವುದು ಪತ್ತೆಯಾಗಿ ಬೆಂಗಳೂರಿನ ಕಿದ್ವಾಯಿ ಕ್ಯಾನ್ಸರ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ. ಈ ಚಿಕಿತ್ಸೆಗಾಗಿ ಅವರು ಈಗಾಗಲೇ 10–15 ಸಾವಿರ ರೂಪಾಯಿಗಳನ್ನು ಸಾಲಮಾಡಿಕೊಂಡಿದ್ದಾರೆ.

ತಂದೆ, ತಾಯಿ, ನಾಲ್ಕುಜನ ಮಕ್ಕಳು. ಹೀಗೆ ಎಂಟು ಜನರ ಕುಟುಂಬಕ್ಕೆ ಬೋಳಬಂಡೆಪ್ಪ ಅವರೇ ಆಧಾರ. ಅವರಿಂದು ಹಣಕಾಸಿನ ತೊಂದರೆಯಿಂದಾಗಿ ಚಿಕಿತ್ಸೆಯನ್ನೇ ನಿಲ್ಲಿಸಬೇಕಾದ ಚಿಂತಾಜನಕ ಸ್ಥಿತಿಯಲ್ಲಿದ್ದಾರೆ.

ದ.ಸಂ.ಸ.ದ ಕನಸುಗಳೊಂದಿಗೆ ಇಷ್ಟು ದೂರ ನಡೆದು ಬಂದ ಬೋಳಬಂಡೆಪ್ಪ ಇಂದು ನಡೆಯಲಾಗದೆ ನಿಂತಿದ್ದಾರೆ. ಅವರ ಚಿಕಿತ್ಸೆಗೆ ನೆರವಾಗಿ ಅವರ ಬದುಕಿಗೆ ಆಸೆ ತುಂಬಬೇಕಾದ ಹೊಣೆ ದ.ಸಂ.ಸ. ಗೆಳೆಯರ ಹಾಗೂ 'ಪಂಚಮ' ಓದುಗರ ಮೇಲಿದೆ.

ಮಾನವೀಯ ಅನುಕಂಪವುಳ್ಳ ಓದುಗರು ಕೈಲಾದ ಹಣಕಾಸಿನ ನೆರವು ನೀಡುವುದರ ಮೂಲಕ ಬೋಳಬಂಡೆಪ್ಪ ಅವರನ್ನು ಉಳಿಸಿಕೊಳ್ಳಬೇಕೆಂಬುದು'ಪಂಚಮ'ದ ಆಸೆ. ದಯವಿಟ್ಟು ಸಾಧ್ಯವಾದಷ್ಟು ಹಣವನ್ನು ಅಕೌಂಟ್ ನಂ. 6/1038, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಗೋಲಾ ಠಾಣಾ, ರಾಯಚೂರು. ಈ ಖಾತೆಗೆ ರವಾನಿಸಬೇಕೆಂದು "ಪಂಚಮ" ವಿನಂತಿಸಿಕೊಳ್ಳುತ್ತದೆ.

— **ಪಂಚಮ**


### ಒಂದು ನಿಮಿಷ

ಎಲ್ಲ ಬಗೆಯ ಆರ್ಥಿಕ, ಧಾರ್ಮಿಕ, ಸಾಮಾಜಿಕ, ಬೌದ್ಧಿಕ ದಬ್ಬಾಳಿಕೆಯ ವಿರುದ್ಧ ದಲಿತರಲ್ಲಿ ಪ್ರಜ್ಞೆ ಮೂಡಿಸಲು ಯತ್ನಿಸುತ್ತಿರುವ ಪಂಚಮಕ್ಕೆ ಚಂದಾದಾರರಾಗಿರಿ.

ಲೇಖನ, ಸುದ್ದಿ ಕಳಿಸುವ ಮೂಲಕ ನೋವುಳ್ಳವರ ನುಡಿಯಾಗಿರುವ ಪಂಚಮವನ್ನು ನಿಮ್ಮ ದನಿಯಾಗಿಸಿಕೊಳ್ಳಿ.

ಬಿಡಿಪ್ರತಿಯ ಬೆಲೆ ರೂ. 1–00
ವಾರ್ಷಿಕ ಚಂದಾ ರೂ. 25–00

ಡಿ. ಡಿ. ಅಥವಾ ಎಂ. ಓ. ಮೂಲಕ ಮಾತ್ರ ಚಂದಾ ಸ್ವೀಕರಿಸಲಾಗುವುದು.

ವಿಳಾಸ:
ಸಂಪಾದಕರು,
**'ಪಂಚಮ' ಪಾಕ್ಷಿಕ**
2B, ಮಹದೇಶ್ವರ ನಿಲಯ,
2ನೇ ಅಡ್ಡರಸ್ತೆ, 2ನೇ ಮುಖ್ಯರಸ್ತೆ,
ಎ. ಕೆ. ಕಾಲನಿ, ಬೆಂಗಳೂರು–40.

# ಆಸೆ ಚಿಗುರಿಸುವ "ಹೋರಾಟದ ಹಾಡುಗಳು"

**"ಹೋರಾಟದ ಹಾಡುಗಳು" ಹೆಸರೇ ಹೇಳುವಂತೆ "ದಲಿತ ಕಲಾ ಮಂಡಳಿ" ಊರೂರುಗಳಲ್ಲಿ ಹಾಡಿ ಜನರ ಎದೆಗೆ ಮುಟ್ಟಿಸಿದ ಹಾಡುಗಳ ಸಂಕಲನ.**

**ಕನ್ನಡದ ದಲಿತ ಬರಹಗಾರರ ಜತೆಗೆ ತೆಲುಗಿನ ಹೋರಾಟದ ಹಾಡುಗಳ ಅನುವಾದವೂ ಈ ಸಂಕಲನದಲ್ಲಿವೆ.**

ಈ ಪುಸ್ತಕ ಕುರಿತು

**● ಚಂದ್ರಶೇಖರ ತಾಳ್ಯ**

ಅವರು ಬರೆದಿರುವ ವಿಮರ್ಶೆ ಇದು

ಕಾವ್ಯ ಮತ್ತು ತತ್ತ್ವ ಒಂದಕ್ಕೊಂದು ಸಂಬಂಧ ಇರುವಂಥವು. ತತ್ತ್ವವು ಜೀವ ಸಂಬಂಧಿಯಾಗಿ ಹೊರ ಬರುವುದು. ಆದ್ದರಿಂದ ಜೀವನ ಮತ್ತು ಕಾವ್ಯವು ಅಂತಿಮವಾಗಿ ಸಂಬಂಧಿಯಾಗುವುವು. ಈ ದಿಕ್ಕಿಂದ 'ಹೋರಾಟದ ಹಾಡುಗಳು' ಪುಸ್ತಕ ನೋಡುವಾಗ ಜೀವ ಸಂಬಂಧಿಯಾದ ತತ್ತ್ವದ ಹಿನ್ನೋಟವೂ ಕೂಡ ಅತಿ ಮುಖ್ಯ ಅನಿಸುವುದು. ಏಕೆಂದರೆ ಈ ಪುಸ್ತಕದ ಹಾಡುಗಳು ಆ ದಿಕ್ಕನ್ನು ಸೂಚಿಸುತ್ತವೆ.



ಇಂಡಿಯಾ ದೇಶದ ಒಂದು ಜನಾಂಗವನ್ನು ಈ ತತ್ತ್ವಗಳೇ ಮೂಲವಾಗಿ ಕತ್ತಲಿಗೆ ನೂಕಿವೆ. ಎಲ್ಲ ದೇಶಗಳೂ ಆಯಾ ದೇಶಗಳ ಚಿಂತಕರು ರೂಪಿಸಿದ ತತ್ತ್ವಗಳಿಗನುಗುಣವಾಗಿಯೇ ತಮ್ಮ ರೂಪ ಪಡೆದಿವೆ. ಪ್ಲೇಟೋ, ಅರಿಸ್ಟಾಟಲ್‌ರಂಥವರಿಂದ ಪಡೆದ ಚಿಂತನೆಯ ಸಾರದಿಂದ ಗ್ರೀಕ್‌ನಂಥ ದೇಶ ಪ್ರಪಂಚದ ಅತಿ ಮುಖ್ಯ ಸಾಂಸ್ಕೃತಿಕ ದೇಶವಾಗಿ ರೂಪುಗೊಂಡಿತು. ಮೂಲಭೂತ ವ್ಯತ್ಯಾಸವೆಂದರೆ ಪಾಶ್ಚಿಮಾತ್ಯರು ತಮ್ಮ ಹಿಂದಿನವರು ರೂಪಿಸಿದ ತತ್ತ್ವಗಳನ್ನು ಪುನರ್ ಪರಿಶೀಲಿಸುತ್ತಾ, ಹೊಸದಿಕ್ಕಿನೆಡೆಗೆ ಸಾಗಿದರೆ ಇಂಡಿಯಾದಂಥ ದೇಶ ಪುರಾತನ ಮೌಲ್ಯಗಳನ್ನೇ ಮತ್ತೆ ಮತ್ತೆ ಪ್ರತಿಷ್ಠಾಪಿಸಲು ಪ್ರಯತ್ನಿಸಿದ್ದು. ಅಲ್ಲಿ ಬೇಕನ್‌ನಂಥವರು ವಿಚಾರದ ದಿಕ್ಕನ್ನೇ ಬದಲಿಸಿ ವಾಸ್ತವತೆಯ ಹತ್ತಿರ ಬಂದದ್ದು, ನೆರೂಡನಂಥ ಕವಿ, ಮಿಲ್ಟನ್‌ನಂಥವರು ಕಾವ್ಯದ ಆಲೋಚನೆಯನ್ನು ಜನರ ಹತ್ತಿರ ತಂದದ್ದು, ಅವರೆಲ್ಲ ಹಳೆಯದನ್ನು ಹೆಂಗೆ ಧಿಕ್ಕರಿಸುತ್ತಾ ಹೊಸದನ್ನು ಕಟ್ಟಿದರು ಎಂಬುದಕ್ಕೆ ಸಾಕ್ಷಿಯಾದರೆ ಇಲ್ಲಿ ಇಂಡಿಯಾದಲ್ಲಿ ಹೊಸ ಆಲೋಚನೆಗಳನ್ನೇ ಚಿವುಟಿಹಾಕುವ ಹುನ್ನಾರ ಅವ್ಯಾಹತವಾಗಿ ನಡೆದು ಬಂದುದಕ್ಕೆ ಇವತ್ತಿನ ನಮ್ಮ ಅಸಮತೋಲನವಾದ ಬದುಕೇ ಸಾಕ್ಷಿಯಾಗಿ ನಿಂತಿದೆ.

ಬುದ್ಧನಂಥವರು; ಲೋಕಾಯತರು ಜೀವನದ ತಳವನ್ನು ಮುಟ್ಟಿಕೊಂಡು ತತ್ತ್ವಗಳನ್ನು ರೂಪಿಸಿದರು. ಆದರೆ ಆ ತತ್ತ್ವಗಳು ವೈದಿಕ ಶಾಹಿಯನ್ನು ಒಪ್ಪದ್ದರಿಂದ, ವೇದಗಳನ್ನು ತುಳಿಯ ಹೊರಟಿದ್ದರಿಂದ, ವೈದಿಕಶಾಹಿ ಇಕ್ಕಟ್ಟಿಗೆ ಸಿಕ್ಕು, ತನ್ನ ನಯವಂಚಕ ಜಾಲವನ್ನು ಈ ತತ್ತ್ವಗಳ ಮೇಲೆ ಹರಡಿ ಆ ತತ್ತ್ವಗಳನ್ನೇ ಕೊಂದು ಹಾಕಿತು. ಈ ರಥ ಕೊಲ್ಲುವ ಕೆಲಸವನ್ನು ಈ ದೇಶದಲ್ಲಿ ತಯಾರು ಮಾಡಿದ 'ಹಿಂದೂ' ಎಂಬ ಧರ್ಮವು ಆ ಕಾಲದಿಂದಲೂ ಆಯಾಸವಿಲ್ಲದೆ ಮಾಡುತ್ತಲೇ ಬಂದಿದೆ. ಹಿಂಗೆ ಕ್ರಿಮಿನಲ್ಲಾಗಿರುವ ಧರ್ಮವನ್ನು ತಾತ್ತ್ವಿಕ ಮಟ್ಟಕ್ಕೇರಿಸಿ ಕಾವ್ಯ ಭಾಷೆಯಲ್ಲಿ ವರ್ಣರಂಜಿತಗೊಳಿಸಿ ಕಲೆಯ ಮೂಲಕ ಬೆರಗುಗೊಳಿಸುವ ರಂಗಿನಲ್ಲಿ ಅದ್ದಿ ಮುಗ್ಧ ಜನತೆಯನ್ನು ಪರವಶರಾಗುವಂತೆ ಮಾಡಲಾಯಿತು. ವರ್ಣಾಶ್ರಮಧರ್ಮ, ಸ್ವರ್ಗನರಕಗಳ ದಿಗಿಲು, ಕರ್ಮ ಸಿದ್ಧಾಂತ, ಪಾಪ ಪುಣ್ಯಗಳ ಕಲ್ಪನೆ, ಇತ್ಯಾದಿ ಅಪಾಹುತಗಳನ್ನೇ ತತ್ತ್ವಗಳು ಎಂಬಂತೆ ತೋರಿಸುತ್ತಾ ಅವು ನಮ್ಮ ಜೀವನದ ರೀತಿಗಳೇ ಆಗುವಂತೆ ಮಾಡಿದ್ದು ಹಿಂದೂ ಧರ್ಮದ ನೈಪುಣ್ಯತೆಗೆ ಸಾಕ್ಷಿ. ಆ ಗಾಯದ ದೊಡ್ಡ ಕಲೆಗಳಾಗಿ ರಾಮಾಯಣ, ಮಹಾಭಾರತಗಳು ಮೂಡಿದವು. ಅವುಗಳ ಬೆನ್ನು ಹತ್ತಿ ಇಲ್ಲಿವರೆಗೂ ಅವುಗಳ ಯಥಾಗತಗಳು ಮೂಡುತ್ತಲೇ ಇವೆ. ಹಿಂಗೆ ಇಂಥವು ಮೂಡಿ ಮೂಡಿ ಒಂದು ಕಡೆ ಒಂದು ಕಾಲುಪಾಲು ಜನಾಂಗ ಸಾಂಸ್ಕೃತಿಕವಾಗಿ ಬೆಳೆಯುತ್ತಾ ಬೆಳೆಯುತ್ತಾ ಮತ್ತೊಂದು ಕಡೆ ಮುಕ್ಕಾಲುಪಾಲು ಜನಾಂಗವನ್ನು ಮುಳುಗಿಸುತ್ತಾ ಮುಳುಗಿಸುತ್ತಾ ಇಡೀ ಬದುಕನ್ನೇ ನಿರ್ವೀರ್ಯವಾಗಿ, ನರಕವಾಗಿ, ಸೂರ್ಯನು ಎಂದೂ ಹುಟ್ಟುವುದೇ ಇಲ್ಲವೇನೋ ಎಂಬಂತೆ ಮಾಡಿದ್ದು ಇಂಡಿಯಾದ ಕ್ರೂರ ಚರಿತ್ರೆಯ ವಿಕಟತೆಯ ಒಂದು ದೊಡ್ಡ ಮಚ್ಚೆ. ಇದು ಇಂದಿಗೂ ಜೀವಂತವಾಗಿದೆ, ಅದನ್ನು ಸಾಯಲು ಬಿಡದಂತೆ ಅಂಥದೇ ಜನಾಂಗ ಈಗಲೂ ಅತಿ ಎಚ್ಚರದಿಂದ ಕೆಲಸ ಮಾಡುತ್ತಿರುವುದು ಮುಂದಿನ ಚರಿತ್ರೆಯ ವಿಕಟತೆ. ಈ ದಿಕ್ಕಿನಿಂದ ಪಾಶ್ಚಾತ್ಯರ ಮನಸ್ಸು ಇಂಡಿಯಾದ ಮನಸ್ಸು ಬೇರೆ ಬೇರೆಯಾಗುವುದು. ಅವರು ಪ್ರಗತಿ ಪರವಾಗಿ ತಿದ್ದಿಕೊಳ್ಳುತ್ತಾ ಬಂದರೆ, ಇವರು ಪ್ರತಿಗಾಮಿತನವನ್ನೇ ಪ್ರಗತಿಪರ ಎಂಬಂತೆ ಬಿಂಬಿಸುತ್ತಾ ಬಂದರು. (ಭೈರಪ್ಪನವರ ಅನೇಕ ಕಾದಂಬರಿಗಳು) ಹಿಂಗಾಗಿ ಬಡಪೆಟ್ಟಿಗೆ ಸರಿಹೋಗದಂತೆ ಕಗ್ಗಲ್ಲಿನ ಬದುಕು ಇಂಡಿಯಾದ್ದು. ಈ ಕಗ್ಗಲ್ಲಿಗೆ ಒಂದು ಆಕಾರ ಕೊಡುವ ಪ್ರಯತ್ನವೇ ಈ ಹೋರಾಟದ ಹಾಡುಗಳು. ಈ ನೆಲೆಯಿಂದ ಇಂಥ ವಿಷಪೂರಿತ ಬದುಕನ್ನು ನಿವಾರಿಸುವ ಔಷಧಿಯ ಗುಣವನ್ನು ಈ ಹಾಡುಗಳು ಪಡೆದಿವೆ ಆದ್ದರಿಂದಲೇ

'ಬರುತಿಹೆವು ನಾವು ಬರುತಿಹೆವು
ಬರುತಿಹೆವು ನಾವು ಬರುತಿಹೆವು
ಯುಗ ಯುಗಗಳಿಂದ ನೀವು ತುಳಿದ ಜನಗಳ
ಕೊರಳ ದನಿಗಳು ನಾವು'

(ಬರುತಿಹೆವು ನಾವು)

ಅನ್ನುವ ಸಾಲುಗಳು ಹೋರಾಟದ ಸೂಚನೆಯನ್ನೂ ಹೋರಾಟದ ಹಿಂದಿರುವ ಸೈದ್ಧಾಂತಿಕ ತಳಪಾಯವನ್ನೂ ಹೇಳುವುದರಿಂದ ಮತ್ತು ಈ ಎಲ್ಲ ಹಾಡುಗಳೂ ಕೂಡ ಇದನ್ನೇ ಹೇಳುವುದರಿಂದ ಈ ಪುಸ್ತಕಕ್ಕೆ ಇಟ್ಟಿರುವ ಹೆಸರು ಕೂಡ ಸೂಕ್ತವಾದದ್ದು ಅನ್ನಿಸುವುದು.

ಒಟ್ಟು ನಲವತ್ತೂರು ಹಾಡುಗಳಿರುವ ಈ ಪುಸ್ತಕದೊಳಗೆ 'ಬರುತಿಹೆವು ನಾವು' ಎಂಬುದು ಮೊದಲ ಹಾಡಾಗಿರುವುದರಿಂದ ಉಳಿದ ಹಾಡುಗಳಿಗೆ ಪೀಠಿಕೆಯಾಗೂ ಕೆಲಸ ಮಾಡಿ ತಾತ್ತ್ವಿಕ ವಿರೋಧಾಭಾಸಗಳನ್ನೂ, ಅಸಮತೆಯ ತೀವ್ರತೆಯನ್ನೂ ಬಿ[illegible] ಕೊಡುವುದು ಈ ಹಾಡು.

"ನಮ್ಮಲ್ಲೆ ನಮಗೇನೆ ಜಗಳಗಳ ತಂದಿಟ್ಟು
ನಮ್ಮ ಬಾಳ ಗೋಳಲ್ಲಿ ಚೆಲ್ಲಾಟವಾಡಿದಿರಿ"

(ಹೊಲೆಯರು ನಾವು)

ಎಂಬ ಸಾಲುಗಳು ಕೂಡ ಜೀವ ವಿರೋ[illegible] ನಿಲುವುಗಳನ್ನು ನಮ್ಮ ಹಿಂದಿನ ಜನ ಹೇ[illegible] ಸಾಧಿಸಿ ನಯವಂಚಕರಾದರು ಎಂಬುದನ್ನು ಸ್ಪ[illegible]

ವಾಗಿ ತೋರಿಸಿಕೊಡುತ್ತವೆ. ಈ ರೀತಿಯ ಮೋಸಕ್ಕೆ ಒಳಗಾದ ಜೀವಿಗಳು ಎಂದೂ ಪ್ರತಿಭಟಿಸದೆ ತಮ್ಮ ಈ ಸ್ಥಿತಿಗೆ ತಾವು ಹಿಂದಲ ಜನ್ಮದಲ್ಲಿ ಮಾಡಿದ "ಕರ್ಮ"ವೇ ಕಾರಣವು ಎಂದುಕೊಂಡು ತಮ್ಮ ತಲೆಯ ಮೇಲೆ ಕಾಲು ಇಟ್ಟವನನ್ನು ದೈವ ಎಂದು ಕರೆಯುತ್ತಿರುವ, "ಹಸಿವಿನಿಂದ ಸತ್ತ್ರೋರ" 'ಕೈ ಮಡಗಿಸಿಕೊಳ್ಳೋರ,' "ಹೇಳಿದಂತೆ ಕೇಳಿ" ಬಾಳುವ ಜನಾಂಗದ ಕಣ್ಣೀರಿನ ಬದುಕನ್ನು ಈ ಪುಸ್ತಕದ ಎಲ್ಲ ಹಾಡುಗಳೂ ಚಿತ್ರವತ್ತಾಗಿ ಕೊಡುವ ಕೆಲಸ ಮಾಡುವಲ್ಲಿ ಜಯಗಳಿಸುವುವು.

ಆಟ ಆಡುತ್ತಾ, ಓದುಕಲಿಯುತ್ತಾ, ನಗುನಗುತ್ತಾ ಇರಬೇಕಾದ ವಯಸ್ಸಿನಲ್ಲಿ ಬಾಲಕನೊಬ್ಬ ಈ ಎಲ್ಲದರಿಂದಲೂ ವಂಚಿತನಾಗಿ ಊರಿಂದ ಕಾಡಿಗೆ ಹೋಗಿ ಹಸು ಕಾಯುತ್ತಾ, ಕಾಲನೂಕುವ ಚಿತ್ರ ಒಬ್ಬ ಬಾಲನದಲ್ಲ; ಇಂಡಿಯಾದ ಮುಕ್ಕಾಲುಪಾಲು ಬಡಜನಗಳ ಮಕ್ಕಳ ಪಾಡಾಗಿಬಿಡುವುದು "ಹಳ್ಳಿಗಾಡಹಸುಗೂಸೆ" ಹಾಡಿನಲ್ಲಿ.

## ದಾರುಣ ಚಿತ್ರಣ

"ಒಂದುದಹನದ ಕತೆ" ನಮ್ಮ ನಾಡೊಳಗೆ ನಡೆದ ಮಾನವ ಹತ್ಯೆಯ ದಾರುಣ ಹಾಗೂ ಘೋರ ಚಿತ್ರಣವಾಗಿದೆ. ಬೆಲ್ಚಿ ಮತ್ತು ದಾಸನಪುರದ ಪ್ರಕರಣಗಳನ್ನು ಇದು ಚಿತ್ರಿಸುವುದು. ಇಂಥ ಸಾವಿರಾರು ಲಕ್ಷೋಪಲಕ್ಷ ಘಟನೆಗಳು ಈ ನೆಲದಲ್ಲಿ ನಡೆಯುತ್ತಲೇ ಇರುವುವು. ಇವುಗಳನ್ನು ಕಾವ್ಯಾತ್ಮಕವಾಗಿ ಹೇಳಿದ್ದು ಕಡಿಮೆ. ಅಂಥ ಒಳ್ಳೆಯ ಕೆಲಸ ಇಲ್ಲಿ ಆಗಿರುವುದು.

ಇದ್ದವರ ಕಾಮುಕತನಕ್ಕೆ ಬಲಿಯಾಗಿ ತಮ್ಮತನ ಕಳೆದುಕೊಂಡಿರುವ ಹೆಣ್ಣುಮಕ್ಕಳ ಚಿತ್ರಣವೂ ಇಲ್ಲಿರುವುದು. "ಚನ್ನಿಬಲಿ" "ತಂಗಿಅನಸೂಯ" ಅಂಥವು. ಇವನ್ನು ಹಾಡುತ್ತಾ ಹೋದರೆ ಎಂಥವರ ಕಣ್ಣೂ ನೀರಾಗುವುವು. ಕೂಲಿಮಾಡಿ ತನ್ನ ಆರೋಗ್ಯವನ್ನೂ ಬೆಚ್ಚಗಿನ ಸುಖವನ್ನೂ ಕಳೆದುಕೊಂಡ ಹೆಣ್ಣಿನ ಚಿತ್ರ 'ಲಚ್ಚುಮಮ್ಮ' ಹಾಡಿನೊಳಗೆ ನಿರೂಪಿತವಾಗಿದೆ.

ಇಂಥ ನೋವುಗಳು ಸದಾ ಇರುವ ಜಗತ್ತಿನ ಬಗ್ಗೆ ಈ ಹಾಡುಗಳು ಎಚ್ಚರದಿಂದಿರುವ ಒತ್ತಿಗೇ ಹೋರಾಟದ ಅಗತ್ಯವನ್ನೂ ಸೂಚಿಸುವುವು. ಇದು ಒಂದು ಮಹತ್ವದ ಸಂಗತಿಯೂ ಹೌದು. ರಾಜಕೀಯ ದುರಾಚಾರ, ರಾಜ್ಯತ್ವದ ಕಲ್ಪನೆ, ಕತ್ತಲು ಮುಸುಕಿರುವ ವಾತಾವರಣ, ಧರ್ಮಗುರುಗಳ ಧಗಲುಬಾಜಿತನ ಇವೆಲ್ಲವುಗಳಿಂದ ತಳಕ್ಕಿಳಿದ ಜನಾಂಗ ಏನುಮಾಡಬೇಕೆಂಬುದನ್ನೂ ಈ ಹಾಡುಗಳು ತೋರಿಸಿ ಕೊಡುವುವು. "ಮನೆಮನೆಯೂ ಕತ್ತಲೆ" 'ಬಗ್ಗುಬಡಿ' 'ವಡ್ಡರೂ ಅಯ್ಯ ನಾವು' 'ನನ್ನ ಜನಗಳು' 'ಕೆಂಪುಕಿರಣ' 'ಕೂಲಿಬಾಳು' ಮುಂತಾದ ಹತ್ತಾರು ಹಾಡುಗಳು ಇಂಥದೊಂದು ಕಲ್ಪನೆಯನ್ನು ಹುಟ್ಟಿಹಾಕುತ್ತವೆ.

ಈ ಹಾಡುಗಳಲ್ಲಿ ಜಾತಿ, ವರ್ಗ, ಹೆಣ್ಣು, ಕಾಯಕ ಇಂಥ ಸಮಸ್ಯೆಗಳಿವೆ. ಸಂಘಟನೆಯ ಅನಿವಾರ್ಯತೆ ಇದೆ. ಎಲ್ಲಕ್ಕಿಂತ ಮುಖ್ಯ ಹೊಸ ಸಮಾಜ ನಿರ್ಮಾಣದ ಆಶಾವಾದ ಇದೆ. ವಾಸ್ತವತೆಯನ್ನು ಈ ಹಾಡುಗಳು ನಮಗೆ ಕಾಣಿಸುವುದರಿಂದ ಈ ಆಶಾವಾದವನ್ನು ನಾವು ಸುಲಭದಲ್ಲಿ ತಳ್ಳಿಹಾಕುವಂತಿಲ್ಲ. ಕಂದಿಹೋದ ಬದುಕಿನ ಚಿತ್ರಣದೊಟ್ಟಿಗೇ ಈ ಸಂಘಟನೆ. ಈ ಆಶೀರ್ವಾದಗಳು ಬೆರೆತು ಮುಂದಿನ ಗತಿಯನ್ನು ನಿರ್ಧರಿಸುವಲ್ಲಿ ಈ ಹಾಡುಗಳು ಸಫಲತೆಯನ್ನು ಪಡಕೊಳ್ಳುತ್ತವೆ. ಆದ್ದರಿಂದ ಕನ್ನಡ ಕಾವ್ಯದ ರಾಜಕೀಯ ಸಂಘಟನೆಯ ಕೊರತೆಯನ್ನು ಈ ಹಾಡುಗಳು ತುಂಬಿಕೊಡುತ್ತವೆ.

ಉದಾ: ನಿನ್ನೆ ದಿನ
ನನ್ನ ಜನ
ಬೆಟ್ಟದಂತೆ ಬಂದರು
...............
.......... .....
ಹೋರಾಟದ ಸಾಗರಕ್ಕೆ
ಸಾವಿರಾರು ನದಿಗಳು. (ಸಾವಿರಾರು ನದಿಗಳು)

೨ ನಮ್ಮ ಮೈಯ ರಕ್ತವೆಲ್ಲ
ಹಿಂಗೋಗಿ ಸಾಯೋ ಮುನ್ನ
ಸಂಘಟಿತರಾಗದೆ ಬೇರೆ ದಾರಿ ಇಲ್ಲಣ್ಣ
(ಯಾತಕೋ ಈ ಬಡವರ ಬಾಳು)

೩ ಗುಡ್ಡಕ್ಕೆ ಹತ್ತಲು ಬೆಂಕಿ
ಮೆಲ್ಲ ಮೆಲ್ಲನೆ ಹಬ್ಬಲಿ ಜ್ವಾಲೆ
ಏಟೊಂದು ಮರಗಳ ಹಾಯಲಿ
ಎಲ್ಲಿ ಕಾಣಲಿ ಅದರ ದಾರಿನ (ಹುಂಜ)

ತಾತ್ವಿಕವಾಗಿ ಇಷ್ಟೆಲ್ಲ ಮಹತ್ವವನ್ನು ಪಡಕೊಂಡಿರೋ ಈ ಹಾಡುಗಳು ಕಲಾತ್ಮಕವಾಗಿಯೂ ವಿಶಿಷ್ಟವಾದವುಗಳು. ಇಲ್ಲಿನ ಅನೇಕ ಹಾಡುಗಳು ಜನಪದ ಕಾವ್ಯದ ರಕ್ತ ಇಟ್ಟುಕೊಂಡಿವೆ. ಅಷ್ಟೇ ಕೆಂಪಾಗೂ ಇವೆ. ಹಾಡಿನ ಗತ್ತನ್ನೂ, ಲಾವಣಿಯ ಗತ್ತನ್ನೂ ಒಳಗೊಂಡು ರಾಗದಿಂದ ಹಾಡಬಲ್ಲವಾಗಿವೆ. ಆದ್ದರಿಂದ ಇಲ್ಲಿ ಆಕಾರ ಮತ್ತು ವಸ್ತು ಎರಡಕ್ಕೂ ಮುಲಾಜು ಮಾಡಲಾಗಿದೆ. 'ಹುಂಜ' 'ಬಿದ್ದಾವು ಮನೆಗಳು' 'ಕೂಲಿಯವರು' 'ದಲಿತರು ಬರುವರು' 'ಬೆಟ್ಟಗಳ ಒಡೆದವು' 'ಬಡಬೀರನ ಕತೆ' ಮುಂತಾದುವು. 'ಹುಂಜ' ಪದ್ಯದ ಕೆಲಸಾಲುಗಳ ನೋಡಿ;

"ನನ ಹುಂಜನ ತುರಾಯಿ ಕೆಂಪು
ರುಮಾಲು ಹಾರ್‍ಯಾಡಿದಾಂಗ
ಅದರ ನೆತ್ತರು ಚಿಮ್ಮಿ
ಹೊಳೆ ಹಳ್ಳಕೆ ಹರಿದೈತಿ"
"ಗುಡ್ಡಕ್ಕೆ ಹತ್ತಲಿ ಬೆಂಕಿ
ಮೆಲ್ಲ ಮೆಲ್ಲನೆ ಹಬ್ಬಲಿ ಜ್ವಾಲೆ
ಏಟೊಂದು ಮರಗಳ ಹಾಯಲಿ
ಎಲ್ಲಿ ಕಾಣಲಿ ಅದರ ದಾರಿನ"

ಇದು ಕೇವಲ ಒಂದು ಹುಂಜದ ವರ್ಣನೆಯಾಗೇ ನಿಲ್ಲದೆ ನರಮನುಷ್ಯನ ವರ್ಣನೆಯಾಗೂ ಧ್ವನಿಸುವುದು. ಕ್ರಾಂತಿಯ ದಾರಿಯನ್ನು ಕಂಡುಕೊಳ್ಳೋ ಸೂಕ್ಷ್ಮತೆಯನ್ನೂ ಅತ್ಯಂತ ಕಾವ್ಯಾತ್ಮಕವಾಗಿ ಅದರ ಕೊನೆಯ ಸಾಲುಗಳು ತೋರಿಸಿಕೊಳ್ಳುವುವು. ಜಾನಪದತೆಯ ದಟ್ಟತೆಯಿಂದ, ಅದರ ಮೆದುತನದಿಂದ ಅದರೊಳಗೇ ಹೊಮ್ಮುವ ನೋವಿನ ಕಿಡಿಯಿಂದ ಈ ಪದ್ಯ ಇಡೀ ಸಂಕಲನದ ಒಂದು ಉತ್ತಮ ಪದ್ಯ ಅಂತ ನನಗನ್ನಿಸುವುದು. ಇಲ್ಲಿನ ಅನೇಕ ಹಾಡುಗಳಿಗೂ ಈ ಗುಣ ಇದೆ. ಅವು ನಮ್ಮನ್ನು ತಟ್ಟುತ್ತವೆ. ನೋವು ಕಾವ್ಯವನ್ನು ಹುಟ್ಟಿಸುವುದು ಎಂಬುದು ಇಲ್ಲಿ ಸತ್ಯವಾಗಿದೆ.

ಕನ್ನಡ ಕಾವ್ಯ ಚರಿತ್ರೆಯಲ್ಲಿ ಇಂಥ ಹಾಡುಗಳನ್ನು ನಾವು ಅಪರೂಪವಾಗಿ ಕಾಣಬಹುದು. ಹಾಗೆ ಅಪರೂಪಕ್ಕೆ ಸಿಕ್ಕುವ ಹಾಡುಗಳು ನೋವಷ್ಟನ್ನೇ ಹೇಳಿ ಸುಮ್ಮನಿರುವುವು. ಆದರೆ ಈ ಹಾಡುಗಳು ನೋವನ್ನು ಗೆಲ್ಲುವ, ಆಕೆಯನ್ನು ಚಿಗುರಿಸುವ ಸ್ಪಷ್ಟತೆ ಪಡಕೊಂಡಿವೆ. ಕತ್ತಲೊಡಲು ಸೀಳಿಕೊಂಡು ಬಂದಿರುವ ಈ ಹಾಡುಗಳು ಕನ್ನಡ ಕಾವ್ಯ ದಿಗಂತವನ್ನು ಮತ್ತಷ್ಟು ವಿಸ್ತರಿಸುವ ಯೋಗ್ಯತೆ ಪಡಕೊಂಡಿವೆ ಮತ್ತು ಕನ್ನಡ ಸಾಹಿತ್ಯ ಪರಂಪರೆಯ ಆರೋಗ್ಯಕರ ಬೆಳವಣಿಗೆಯ ಘಟ್ಟವೂ ಆಗಿವೆ. ●

## ದಲಿತರ ಗೋರಿಯ ಮೇಲೆ ಕೆಂಪು ಗುಲಾಬಿ

(2ನೇ ಪುಟದಿಂದ)

ಸಾವಿರಾರು ವರ್ಷಗಳಿಂದ ನಿರಂತರ ದೌರ್ಜನ್ಯಕ್ಕೆ ಒಳಗಾದ, ಆರ್ಥಿಕ, ಸಾಮಾಜಿಕವಾಗಿ ತುಳಿತಕ್ಕೆ ಈಡಾದ ಈ ದೇಶದ ಮಣ್ಣಿನ ಮಕ್ಕಳಾದ ದಲಿತರು ವಿದ್ಯೆಯಿಂದ ವಂಚಿತರಾಗಿ, ಅಂಬೇಡ್ಕರ್‌ರವರ ಸ್ವಾಭಿಮಾನಿ ಚಳುವಳಿ ತಂದುಕೊಟ್ಟ ಮೀಸಲಾತಿಯಿಂದ ಅರೆಬರೆ ಶಿಕ್ಷಣ ಪಡೆದೂ ಯೋಚಿಸುವಂತಾಗಿರುವುದು ಇಂತಹವರಿಗೆ ನುಂಗಲಾರದ ತುತ್ತಾಗಿದೆ ಎನ್ನಿಸಿತು. ಇಂಡಿಯಾದಲ್ಲಿ ಬೇರು ಬಿಟ್ಟಿರುವ ಅಸ್ಪೃಶ್ಯತೆಯಂತಹ ಸಾಮಾಜಿಕ ಪಿಡುಗನ್ನು ವಸ್ತುನಿಷ್ಠವಾಗಿ ಯೋಚಿಸದೆ, ಟೀಕೆ ಮತ್ತು ದೋಷಾರೋಪಣೆಯಲ್ಲಿ ತೊಡಗಿದಂತಿತ್ತು. ದಲಿತ ವರ್ಗಗಳು ತಮ್ಮ ಹಕ್ಕು ಬಾಧ್ಯತೆಗಳನ್ನು ಕಾಪಾಡಿಕೊಳ್ಳಲು ತಮ್ಮದೇ ಆದ ಪ್ರತ್ಯೇಕ ಸಂಘಗಳನ್ನು ಕಟ್ಟುತ್ತಿರುವುದು ಇಂತಹವರಿಗೆ ಹೇಗೆ ತಾನೇ ಸಹಿಸಲಾದೀತು.

ಕೊನೆಯದಾಗಿ ಒಂದು ಮಾತು:

ಈ ದೇಶದ ಕಮ್ಯೂನಿಸ್ಟ್ ಚಳುವಳಿಗಳು ಸಮಾಜದ ಕೆಳಜಾತಿಗಳಿಗೆ ಸ್ಪಂದಿಸದೆ ಹೋದರೆ ಹೋಗಲಿ. ಆದರೆ ಕನಿಷ್ಠ ದಲಿತರ ಮಾರಣಹೋಮಗಳು ನಡೆಯುವಾಗ ಚಕಾರವೆತ್ತದೆ "ಬ್ರಾಹ್ಮಣಶಾಹಿ ಕುತಂತ್ರ"ಗಳಲ್ಲಿ ತೊಡಗುವುದು ನನ್ನಲ್ಲಿ ಜಿಗುಪ್ಸೆ ಹುಟ್ಟಿಸಿತು. ತಾವೇ ಸಾಚಾ ಎಂದು ಘೋಷಿಸಿಕೊಂಡಿರುವ ಕಮ್ಯೂನಿಸ್ಟರು ನೈತಿಕತೆ ಇಲ್ಲದ ವರ್ಗ ಸಂಘರ್ಷದ ಮೂಲಕ "ಶೋಷಣಾಮುಕ್ತ ಸಮಾಜಕ್ಕೆ" ದುರಂತದ ಗೋರಿ ತೋಡುತ್ತಿದ್ದಾರೆ ಎಂದೆನಿಸಿತು. ಇದು ಹೀಗೆ ಆದರೆ ಒಂದು ದಿನ ದಲಿತರ ಗೋರಿಗಳ ಮೇಲೆ ಕಮ್ಯುನಿಷ್ಟರ ಸಮತೆಯ ಗುಲಾಬಿಯೊಂದೇ ಅರಳಬಲ್ಲುದೇನೋ. ●

ಎರಡು ಉಪನ್ಯಾಸಗಳು

# ಭಾರತದ ಬೌದ್ಧಿಕ ದಾರಿದ್ರ್ಯ

ಮೂಲ: ಕೆ.ವಿ.ನಾರ್ಲ
ಅನು: ಗಂಗಾಧರಮೂರ್ತಿ

"ಭಾರತದಲ್ಲಿ ಬೌದ್ಧಿಕ ದಾರಿದ್ರ್ಯ" ಕೆ. ವಿ. ನಾರ್ಲ ಅವರ ಎರಡು ಇಂಗ್ಲಿಷ್ ಉಪನ್ಯಾಸಗಳ ಸಂಗ್ರಹ. ಮೈಸೂರಿನ ಪ್ರಸಾರಾಂಗ 'ಪಾವರ್ಟಿ ಆಫ್ ಇಂಟಿಲೆಕ್ಚುಯಲಿಸಂ ಇನ್ ಇಂಡಿಯಾ' ಎಂಬ ಹೆಸರಲ್ಲಿ ಪ್ರಕಟಿಸಿತ್ತು.

ಗೌರಿಬಿದನೂರು ನ್ಯಾಷನಲ್ ಕಾಲೇಜಿನ ಉಪನ್ಯಾಸಕರಾದ ಬಿ. ಗಂಗಾಧರ ಮೂರ್ತಿ ಅವರು ಇದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ವಿಚಾರವಾದದ ಸತ್ವಪೂರ್ಣ ಬೇರುಗಳನ್ನು, ಕಾಲಾನುಕ್ರಮವಾಗಿ ಹರಿಯುತ್ತಾ ಬಂದ ಜೀವಪರ ಸಾಂಸ್ಕೃತಿಕ ವಿಚಾರಧಾರೆಯನ್ನು ಆಳವಾಗಿ ವಿಶ್ಲೇಷಿಸಿ ಕೆ. ವಿ. ನಾರ್ಲ ಅವರು ಮಂಡಿಸಿರುವ ಉಪನ್ಯಾಸಗಳಿವು.

ವಿಚಾರವಾದ, ವೈಚಾರಿಕತೆ, ಭೌತಿಕವಾದ ಮುಂತಾಗಿ ಅರೆಬರೆ ಅರಿವಿನ ಗೊಂದಲಗಳಲ್ಲಿರುವ ಎಲ್ಲಾ ಓದುಗರಿಗೂ, ಕಾರ್ಯಕರ್ತರಿಗೂ ಅನೇಕ ಒಳನೋಟಗಳನ್ನು ಈ ಉಪನ್ಯಾಸಗಳು ಒದಗಿಸಬಲ್ಲವು. ಹೊಸ ಸಮಾಜದ ಕನಸು ಹೊತ್ತ ಪ್ರತಿಯೊಬ್ಬರೂ ಶ್ರದ್ಧೆಯಿಂದ ಅಧ್ಯಯನ ಮಾಡಬೇಕಾದ ಉಪನ್ಯಾಸಗಳಿವು.

"ಪಂಚಮ"ದ ಓದುಗರಂತೂ ಅತ್ಯಗತ್ಯವಾಗಿ ಓದಲೇಬೇಕಾದ ಉಪನ್ಯಾಸಗಳಿವು. ಆದ್ದರಿಂದಲೇ "ಪಂಚಮ" ಈ ಉಪನ್ಯಾಸಗಳನ್ನು ಈ ಸಂಚಿಕೆಯಿಂದ ಧಾರಾವಾಹಿಯಾಗಿ ಪ್ರಕಟಿಸಲಿದೆ.

● ಸಂಪಾದಕ

ವೈಚಾರಿಕತೆ ಎಂದರೇನು? ಎಂ.ಎಸ್. ರಾಯ್ ಮತ್ತು ಎಂ.ಕೆ. ಗಾಂಧಿ ಇಬ್ಬರಲ್ಲಿ ಒಬ್ಬ ಹೇಗೆ ವಿಚಾರವಾದಿ, ಮತ್ತೊಬ್ಬ ಹೇಗೆ ಅಲ್ಲ ಎನ್ನುವ ಉದಾಹರಣೆಯಿಂದ ನಾವು ಇದನ್ನ ಪರಿಶೀಲಿಸಬಹುದು. ಸೂಕ್ಷ್ಮವಾಗಿ ಗ್ರಹಿಸುವ, ಪರಿಶೀಲಿಸುವ, ವಿವೇಚಿಸುವ ಮತ್ತು ಸಮರ್ಥವಾಗಿ ವರ್ಗೀಕರಿಸುವ ಸಾಮರ್ಥ್ಯ ಇಬ್ಬರಲ್ಲೂ ಇತ್ತು.

ಗಾಂಧಿ ಯಾವಾಗಲೂ "ಆತ್ಮ"ದ ಬಗ್ಗೆ, "ಆತ್ಮಶಕ್ತಿ" ಬಗ್ಗೆ ಮಾತನಾಡುವುದನ್ನು ನಾವು ಗಮನಿಸಬಹುದು. ಗಾಂಧಿ ಸಂಪೂರ್ಣವಾಗಿ ವೈಚಾರಿಕತೆಯನ್ನು ನಿರ್ಲಕ್ಷಿಸದಿದ್ದರೂ ಅದು ಆತ್ಮದಷ್ಟು ಪ್ರಮುಖವಾದದ್ದೆಂದು ಅವರಿಗೆ ಅನ್ನಿಸಲಿಲ್ಲ. ಆದರೆ ಅವಹೇಳನಕರವಾದ ರೀತಿಯಲ್ಲಿ ಅಲ್ಲದೆ ಬೇರೆ ಅರ್ಥದಲ್ಲಿ, ರಾಯ್ ಅವರ ಬರವಣಿಗೆಯಲ್ಲಿ "ಆತ್ಮ" ಎನ್ನುವ ಪದವು ಕಾಣಬರುವುದಿಲ್ಲ.

"ಜಗತ್ತಿನ ಮಹಾನ್ ಚಳುವಳಿಗಳನ್ನು ಕೇವಲ ಬೌದ್ಧಿಕವಾಗಿ ಮುನ್ನಡೆಸುವುದು ಸಾಧ್ಯವಿಲ್ಲ, ಅವು ಮುನ್ನಡೆಯಲು ಆಧ್ಯಾತ್ಮಿಕ ಪ್ರಯತ್ನ ಅಥವಾ ಆತ್ಮಶಕ್ತಿಯೂ ಬೇಕು... ಎಂದು ಗಾಂಧಿ ತಿಳಿದಿದ್ದರು. ಆಧುನಿಕರಾದ ರಾಯ್ ಮತ್ತು ಗಾಂಧಿಯ ಸಮಾನ ಧೋರಣೆಗಳನ್ನುಳ್ಳ ಇಬ್ಬರು ವ್ಯಕ್ತಿಗಳನ್ನು ಪ್ರಾಚೀನ ಭಾರತದಲ್ಲಿ ಕಾಣಬಹುದು. ಅವರೆಂದರೆ ಉದ್ದಾಲಕ ಮತ್ತು ಯಾಜ್ಞವಲ್ಕ್ಯರು.

ಉದ್ದಾಲಕ ಮತ್ತು ಯಾಜ್ಞವಲ್ಕ್ಯರು, ಐತಿಹಾಸಿಕ ವ್ಯಕ್ತಿಗಳೆ? ಈ ಅಂಶ ಸಂದೇಹಾಸ್ಪದ. ಇದನ್ನು ಕುರಿತು ಪೇಲ್ ರೀಪೇ ಹೀಗೆ ಬರೆಯುತ್ತಾನೆ.

"ಪ್ರಾರಂಭದ ಉಪನಿಷತ್ತುಗಳಲ್ಲಿ ನಮ್ಮ ವಿಶೇಷ ಗಮನ ಸೆಳೆಯುವ ವ್ಯಕ್ತಿಗಳೆಂದರೆ, ಬಹುಶಃ ಕಾಲ್ಪನಿಕ ಪಾತ್ರಗಳಾಗಿರಬಹುದಾದ, ಉದ್ದಾಲಕ ಮತ್ತು ಯಾಜ್ಞವಲ್ಕ್ಯರು." ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ದಾಖಲಾಗಿರುವ ಅತಿಪ್ರಾಚೀನವಾದ ಪ್ರಕೃತಿವಾದ (ವಿಚಾರವಾದ)ದ, ಪ್ರತಿನಿಧಿ ಉದ್ದಾಲಕನಾದರೆ, ಕಾಲಾನಂತರದಲ್ಲಿ ವೇದಾಂತ ತತ್ವಜ್ಞಾನವಾಗಿ ರೂಪು ಪಡೆದುಕೊಂಡ ಆದರ್ಶವಾದದ, ಆರಂಭದ ಅತಿ ಮುಖ್ಯ ಪ್ರತಿನಿಧಿಯೂ ಆಗಿ ಯಾಜ್ಞವಲ್ಕ್ಯ ಕಂಡು ಬರುತ್ತಾನೆ. ಉದ್ದಾಲಕನ ಪಾತ್ರವನ್ನು ಕಾಲ್ಪನಿಕವೆಂದು ಪರಿಗಣಿಸಿದರೂ ಕೆಲವರಲ್ಲಾದರೂ ಕಂಡುಬಂದ ಪ್ರಕೃತಿವಾದದ, ಪ್ರತಿನಿಧಿ ಎನ್ನಬಹುದು. ಅಷ್ಟೇ ಅಲ್ಲದೆ; ಅಜೀವಕ, ಚಾರ್ವಾಕ ಅಥವಾ ಸಾಮಾನ್ಯವಾಗಿ ಪ್ರಥಮ ಭೌತಿಕವಾದಿಗಳು ಎಂದು ಕರೆಯಲಾಗುವ ಲೋಕಾಯತರಿಗಿಂತ, ಮೊದಲು ಭಾರತದಲ್ಲಿ; ಕಾಣಿಸಿಕೊಂಡ ದೃಷ್ಟಿಕೋನವೆಂದರೆ ಪ್ರಕೃತಿವಾದ. ಉದ್ದಾಲಕನು ಕ್ರಿ.ಪೂ. 640 ಮತ್ತು 610ರ ಕಾಲದವನು ಎನ್ನುವ ಅಭಿಪ್ರಾಯವಿದೆ. ಒಂದು ವೇಳೆ ಇದು ನಿಜವೇ ಆದರೆ "ಥೇಲ್ಸ್"ನಿಗಿಂತ ಮುಂಚೆಯೇ ಇದ್ದ ಎಂದಂತಾಗುತ್ತದೆ. ತನಗೂ ಮುಂಚೆಯೇ ಪ್ರಚಲಿತದಲ್ಲಿದ್ದ ವೇದಗಳಲ್ಲಿನ ವಿಶ್ವರೂಪ ಮತ್ತು ಅವತಾರಗಳ ಪರಂಪರೆಯನ್ನು ಖಂಡಿಸಿ "ಜಡವಾದ"ವನ್ನು ಎತ್ತಿಹಿಡಿದ, ಅಲ್ಲದೆ ಪ್ರಪಂಚದ ಬಗೆಗೆ ಭೌತವಾದೀ ದೃಷ್ಟಿಯನ್ನು ಹೊಂದಿದವನಾಗಿದ್ದ. ಉದ್ಧಾಲಕ ಜಾತಕದಲ್ಲಿ ಕಂಡುಬರುವಂತೆ ವೇದಗಳ ಬಗ್ಗೆ ಅವನ ನಿಲುವು ಹೀಗಿತ್ತು: "ಸಾವಿರಾರು ವೇದಗಳನ್ನು ತಿಳಿದೂ ಮನುಷ್ಯ ದುಃಖದಿಂದ ಪಾರಾಗಲು ಸಾಧ್ಯವಿಲ್ಲದಿದ್ದರೆ ಸೂಕ್ತ ಮಾರ್ಗವನ್ನು ಅರಿಯಲು ಸಾಧ್ಯವಾಗದಿದ್ದರೆ; ನನ್ನ ಅಭಿಪ್ರಾಯದಲ್ಲೇ ವೇದಗಳು ನಿರುಪಯೋಗಿ; ಸ್ವಯಂ ನಿಗ್ರಹದ ದಾರಿಯೊಂದೇ ಸತ್ಯ."

"ಉದ್ದಾಲಕನ ವೈರಿಯೆಂದರೆ ಭಾರತದ ಮೊದಲ ಪ್ರಖ್ಯಾತ ಆದರ್ಶವಾದಿ ತತ್ವಜ್ಞಾನಿಯಾದ ಯಾಜ್ಞವಲ್ಕ್ಯ. ಅವನ ಪ್ರಕಾರ ಈ ಬ್ರಹ್ಮಾಂಡದಲ್ಲಿ "ಸತ್" ಒಂದು ರೀತಿಯ ಸಂಗೀತ-ವಾದ್ಯವಿದ್ದಂತೆ. ಭೌತ ವಸ್ತುಗಳಿಂದ ಕೂಡಿರುವ ಈ ಪ್ರಪಂಚ ಈ ವಾದ್ಯದಿಂದ ಮಿಡಿಸಲ್ಪಟ್ಟ ನಾದದಂತೆ. ಆದ್ದರಿಂದಲೇ ಪ್ರಕೃತಿಯು ನಾದದಂತೆ ನಮ್ಮ ಅರಿವಿನ ಆಚೆಗಿರುವಂತಹದ್ದು" ಎಂದು ಯಾಜ್ಞವಲ್ಕ್ಯನನ್ನು ಕುರಿತು ಬರೆಯುತ್ತಾನೆ ರೀಪೆ. ಈ ಉದಾಹರಣೆಯ ಮೂಲಕ ಯಾಜ್ಞವಲ್ಕ್ಯನ ಪ್ರಕಾರ ಭೌತಿ

*ಥೇಲ್ಸ್-ಕ್ರಿ.ಪೂ. 7ನೇ ಶತಮಾನದ ಗ್ರೀಕ್ ತತ್ವಜ್ಞಾನಿ. ಜಗತ್‌ಸೃಷ್ಟಿಯ ಭೌತಿ ಆಧಾರವನ್ನು ಕಂಡು ಹಿಡಿಯಲು ಯತ್ನಿಸಿದ ಗ್ರೀಸ್‌ನ ಸಪ್ತರ್ಷಿಗಳಲ್ಲಿ ಒಬ್ಬನೆಂದು ಇವನನ್ನು ಪರಿಗಣಿಸಲಾಗಿದೆ.

(ಅನು

ಪ್ರಪಂಚವು ಕೇವಲ ಭ್ರಮೆ, ಅಸತ್ಯ. ಸತ್ಯಪ್ರಜ್ಞೆ, ಮತ್ತು ಆನಂದಮಯವಾದದು "ಆತ್ಮ" ಆತ್ಮವೊಂದೇ ಸತ್ಯ. ಯಾಜ್ಞವಲ್ಕ್ಯನು ವಿದೇಹದ ರಾಜನಾದ ಜನಕನ ಸಮಕಾಲೀನನೂ ಬೃಹದಾರಣ್ಯ ಉಪನಿಷತ್ತಿನಲ್ಲಿ ಪ್ರಮುಖವಾಗಿ ಕಾಣಿಸಿಕೊಳ್ಳುವಂತಹವನೂ ಆಗಿದ್ದಾನೆ. ಅವನಿಗೆ ಇಬ್ಬರು ಹೆಂಡತಿಯರು- ಕಾತ್ಯಾಯಿನಿ ಮತ್ತು ಮೈತ್ರೇಯಿ. ಭೌತಿಕ ಪ್ರಪಂಚದಲ್ಲಿ ನಂಬಿಕೆಯಿಲ್ಲದ ಇವನು ತನ್ನ ಆದರ್ಶವಾದೀ ತತ್ವವನ್ನು ಮೈತ್ರೇಯಿಗೆ ಬೋಧಿಸಿದ. ಆದರೆ ಭೌತಿಕ ಪ್ರಪಂಚವನ್ನು ನಿರ್ಲಕ್ಷಿಸುವುದು ಅಸಾಧ್ಯ ಅಲ್ಲವೇ? ಆದ್ದರಿಂದ ತನ್ನ ಅಪರಿಮಿತ ಐಶ್ವರ್ಯವನ್ನು ಕಾತ್ಯಾಯಿನಿಗೆ ವರ್ಗಾಯಿಸಿದ. ಇಲ್ಲಿನ ಸಮನ್ವಯ ದೃಷ್ಟಿ ಒಂದು ರೀತಿಯಲ್ಲಿ ಈ ಎರಡೂ ಪ್ರಪಂಚಗಳ ಅನುಕೂಲಗಳನ್ನು ಅನುಭವಿಸುವ ಬುದ್ಧಿವಂತಿಕೆಯಾಗಿದೆ.

ಮೇಲಿನ ಅಂಶಗಳಿಂದ "ಆತ್ಮ" ಎಂದು ಕರೆಯಲಾಗುವುದಕ್ಕೂ ವೈಚಾರಿಕತೆಗೂ ಯಾವ ಸಂಬಂಧವೂ ಇಲ್ಲ ಎನ್ನುವ ವಿಷಯ ಸ್ಪಷ್ಟವಾಗುತ್ತದೆ. ಹಾಗೆ ನೋಡಿದರೆ ವೈಚಾರಿಕತೆಯನ್ನು ಬಹಳಷ್ಟು ಸಂದರ್ಭಗಳಲ್ಲಿ ವಿಚಾರವಾದಕ್ಕೆ ಸಮಾನಾರ್ಥಕವಾಗಿ ಬಳಸುತ್ತಾರೆ. ಇತ್ತೀಚೆಗೆ ಈ ಪದವನ್ನು ಮಾನವತಾವಾದಕ್ಕೆ ಪರ್ಯಾಯವಾಗಿಯೂ ಬಳಸುತ್ತಾರೆ. ನಾನು ವೈಚಾರಿಕತೆ, ವಿಚಾರವಾದ ಮತ್ತು ಮಾನವತಾವಾದದ ಈ ಮೂರೂ ಪದಗಳನ್ನು ಪರ್ಯಾಯವಾಗಿ ಉಪಯೋಗಿಸುವುದರಿಂದ ದಯವಿಟ್ಟು ತಾವು ಈ ಅಂಶವನ್ನು ಮರೆಯಬಾರದು.

ಜ್ಞಾನವನ್ನು ಸಂಪಾದಿಸುವ ಒಂದು ಮಾರ್ಗವಾಗಿ ವಿಚಾರವಾದಿಯು ವೈಚಾರಿಕತೆಗೆ ಆದ್ಯತೆಯನ್ನು ಕೊಡುತ್ತಾನಾದರೂ ಮನಸ್ಸು ಅಥವಾ ಭಾವನೆಗಳನ್ನು ಹೇಗೆ ಸಂಪೂರ್ಣವಾಗಿ ತಿರಸ್ಕರಿಸುವುದಿಲ್ಲವೋ ಹಾಗೆಯೇ ಇಂದ್ರಿಯ ಜಗತ್ತನ್ನೂ ಅವನು ತಿರಸ್ಕರಿಸುವುದಿಲ್ಲ. ಹಾಗೇನಾದರೂ ತಿರಸ್ಕರಿಸಿದರೆ ವಿಚಾರವಾದಿ ಎಂದು ಕರೆಸಿಕೊಳ್ಳುವ ಯೋಗ್ಯತೆಯನ್ನೇ ಕಳೆದುಕೊಳ್ಳುತ್ತಾನೆ. ಸೂತ್ರಾಂಧತೆಯಿಂದ ತನ್ನನ್ನು ಬಿಡಿಸಿಕೊಳ್ಳುವುದು ಮತ್ತು ನಿರ್ಧಾರಪೂರ್ವಕವಾಗಿ ಧರ್ಮಾಂಧತೆಯೆದುರು ಸೆಣಸುವುದು- ಇವೆರಡೇ ವಿಚಾರವಾದಿಯನ್ನು ಬೇರೆಯವರಿಗಿಂತ ಭಿನ್ನ ಎಂದು ತೋರಿಸುವ ಗುಣಗಳು. ಆದ್ದರಿಂದ ಜ್ಞಾನಾರ್ಜನೆಯ ಪ್ರಕ್ರಿಯೆಯಲ್ಲಿ, ಸತ್ಯಶೋಧನೆಯ ಸೆಣಸಾಟದಲ್ಲಿ ಅವನ ಮನಸ್ಸು, ಭಾವನೆ, ಮತ್ತು ಇಂದ್ರಿಯಗಳಂತಹ ಅನುಭವವಾಹಕಗಳು ನೀಡುವ ಆಧಾರಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಆದರೆ ಸಾಕ್ಷ್ಯಾಧಾರಗಳು ಅಸಂಬದ್ಧವಾಗಿರಬಾರದಷ್ಟೆ. ಈ ಷರತ್ತನ್ನು ಒಪ್ಪಿದಲ್ಲಿ ಅವನು ಅಂತರ್‌ದೃಷ್ಟಿ ಮತ್ತು ದಿವ್ಯಜ್ಞಾನದಂತಹ ಅಂಶಗಳನ್ನೂ ಗಮನಿಸಬೇಕೆಂಬುದು ನನ್ನ ಅಭಿಪ್ರಾಯ. ಏಕೆಂದರೆ ಮನಸ್ಸಿನ ಆಳದಲ್ಲಿ ಅಂತರ್ಗತವಾಗಿರುವ ಸತ್ಯದ ಆವಿರ್ಭಾವವೇ ಅಂತರ್‌ದೃಷ್ಟಿಯಾದರೆ, ಕ್ಷಣಮಾತ್ರದಲ್ಲಿ ಹೊಳೆದು ಮಾಯವಾಗುವ ವಿವೇಚನಾಶಕ್ತಿಯೇ ದಿವ್ಯಜ್ಞಾನ.

ಈಗ, ವಿಚಾರವಾದಿಯ ಮತ್ತೊಂದು ಪ್ರಮುಖ ಗುಣವನ್ನು ನಾವು ಗಮನಿಸಬಹುದು. ಅವನು ಬೇರೆಯವರ ವಿಚಾರಗಳನ್ನು, ಪರಿಕಲ್ಪನೆಗಳನು, ಅಥವಾ ತತ್ವಚಿಂತನೆಯನ್ನು ಒಪ್ಪದಿದ್ದರೂ ಅವರ ಧ್ವನಿಯನ್ನಡಗಿಸುವ ಪ್ರಯತ್ನವನ್ನು ಮಾಡುವುದಿಲ್ಲ. ಇಂತಹ ಉದಾತ್ತ ಗುಣದ ಕ್ಲಾಸಿಕಲ್ ಉದಾಹರಣೆಯನ್ನು, ವಾಲ್ಟೇರ್‌ನಲ್ಲಿ ನಾವು ನೋಡಬಹುದು. ರೂಸೋ ತನ್ನ 'Social contract' ಕೃತಿಯನ್ನು ಪ್ರಕಟಿಸಿದಾಗ ವಾಲ್ಟೇರ್, ರೂಸೋನ ಒರಟು ಭಾವನೆಗಳು ಈ ಕೃತಿಯಲ್ಲಿ ಹೆಚ್ಚು ಪ್ರಕರವಾಗುತ್ತಿರುವುದನ್ನು ನೋಡಿ ತನಗಾದ ವೇದನೆಯನ್ನು ತನ್ನ ಸ್ನೇಹಿತನಿಗೆ ಬರೆದ ಒಂದು ಪತ್ರದಲ್ಲಿ ಹೀಗೆ ವಿವರಿಸುತ್ತಾನೆ:

"ಮನುಷ್ಯನಿಗೂ ಮಂಗನಿಗೂ ಇರುವ ಸಾದೃಶ್ಯವೇ ದಾರ್ಶನಿಕನಿಗೂ ರೂಸೋಗೂ ಇರುವುದು ಕಂಡು ಬರುತ್ತದೆ." ಮುಂದುವರೆದು ಅವನು ರೂಸೋನನ್ನು ಡಯೋಜನಿಸ್ ಹುಚ್ಚುಹಿಡಿದ ನಾಯಿ ಎಂದು ಕರೆಯುತ್ತಾನೆ. ಆದರೂ ರೂಸೋಗೆ ಬರೆದ ಪತ್ರದಲ್ಲಿ ಅವನು ಹೇಳುವುದನ್ನು ನೋಡಿ:

ಡಯೋಜಿನಿಸ್ - ಗ್ರೀಕ್ ತತ್ವಜ್ಞಾನಿ (ಕ್ರಿ. ಪೂ. 400–325 ಮನುಷ್ಯ ತನ್ನ ಸಹಜ ಆಗತ್ಯಗಳನ್ನು ಈಡೇರಿಸಿಕೊಳ್ಳುವಲ್ಲಿ ಕಟ್ಟುಪಾಡುಗಳ ಸಂಬಂಧವನ್ನು ನಿರಾಕರಿಸಿದ್ದರಿಂದ ಇವನನ್ನು Kyon (ನಾಯಿ) ಎಂದು ಕರೆಯಲಾಗಿದ್ದ. (ಅನು)

"ನಿನ್ನ ಮಾತುಗಳನ್ನು ನಾನು ಒಪ್ಪುವುದಿಲ್ಲ. ಆದರೆ ಹೇಳುವ ನಿನ್ನ ಹಕ್ಕನ್ನು ಸಂರಕ್ಷಿಸಲು ನಾನು ಪ್ರಾಣವನ್ನಾದರೂ ಕೊಡಲು ಸಿದ್ಧ". ವಾಲ್ಟೇರ್ ಹೀಗೆ ಹೇಳಿದ್ದಷ್ಟೇ ಅಲ್ಲ. ರೂಸೋ ತನ್ನ ಶತ್ರುಗಳಿಂದ ಸಂರಕ್ಷಿಸಿಕೊಳ್ಳಲು ದೇಶಭ್ರಷ್ಟನಾಗಿ ಓಡಬೇಕಾದ ಸಂದರ್ಭದಲ್ಲಿ ವಾಲ್ಟೇರ್ ಜಿನೀವಾದ ಬಳಿಯ ತನ್ನ ವಾಸಸ್ಥಾನವಾದ ಲೇಡೆಲಿಸಿಗೆ ಬಂದು ತನ್ನೊಡನಿರಲು ಆಹ್ವಾನಿಸಿದ.

ವಿಚಾರವಾದಿಗಳ ಈ ಉದಾತ್ತತೆಗೆ ತದ್ವಿರುದ್ಧವಾಗಿ ಆದರ್ಶವಾದಿಗಳಲ್ಲಿ ಅಸಹನೆ ಸಾಮಾನ್ಯವಾಗಿ ಕಾಣುವ ಗುಣ. ಕೆಲವು ಸಂದರ್ಭಗಳಲ್ಲಿ ಅದು ಧರ್ಮಾಂಧತೆಯಾಗಿಯೂ ಕೊಲೆಗಡುಕುತನದ್ದಾಗಿಯೂ ಕಂಡುಬರುತ್ತದೆ. ಇದರ ಕಾರಣ ಗೊತ್ತಿರುವಂತದ್ದೇ. ಸುಸಂಬದ್ಧವೂ ಸ್ವಯಂಶಕ್ತಶಾಲಿಯೂ ಆದ ವಾದವೊಂದನ್ನು ಎದುರಿಸುವಂತಹ ಸಾಮರ್ಥ್ಯವು ನಮ್ಮಲ್ಲಿ ಇಲ್ಲದೇ ಇದ್ದಾಗ ನಮ್ಮ ಕಸಿವಿಸಿತನವನ್ನು ಬಚ್ಚಿಟ್ಟುಕೊಳ್ಳಲೂ ಸಹನೆಯನ್ನು ಕಳೆದುಕೊಳ್ಳುವುದು ಸ್ವಾಭಾವಿಕ ಕೆಲವೊಂದು ತೀಕ್ಷ್ಣಸಂಧರ್ಭಗಳಲ್ಲಿ ದೈಹಿಕ ಹಿಂಸೆಗೆ ಇಳಿಯುವುದೂ ಅಷ್ಟೇ ಸ್ವಾಭಾವಿಕ. ವಿಚಾರವಾದದ ವೈರಿಗಳಾದ ಆದರ್ಶವಾದಿಗಳಾಗಲೀ, ಅಪೌರುಷೇಯವಾದಿಗಳಾಗಲೀ, ರಮ್ಯವಾದಿಗಳಾಗಲೀ, ಜಿಜ್ಞಾಸುಗಳಾಗಲೀ, ದೃಷ್ಟಿಪ್ರಮಾಣವಾದಿಗಳಾಗಲೀ, ವಿಚಾರವಾದವನ್ನು ನಿರ್ವೀರ್ಯಗೊಳಿಸುವುದು ಸಾಧ್ಯವಾಗಲಿಲ್ಲ. ಆದ್ದರಿಂದಲೇ ಅವರು ವಿಚಾರವಾದಿಗಳನ್ನು ಅಪಹಾಸ್ಯ ಮಾಡುತ್ತಾರೆ, ಅವಹೇಳನ ಮಾಡುತ್ತಾರೆ, ಹಂಗಿಸುತ್ತಾರೆ ಹಾಗೂ ಅವರನ್ನು ನಿರ್ನಾಮಮಾಡಲು ಯತ್ನಿಸುತ್ತಾರೆ. ಬಾಯಿ ಮುಚ್ಚಿಸುವ ಇಂತಹ ಪ್ರಯತ್ನ ಭಾರತದಲ್ಲಷ್ಟೆ ಅಲ್ಲ ಪ್ರಪಂಚದ ಹಲವಾರು ದೇಶಗಳಲ್ಲೂ ಕಂಡುಬರುತ್ತದೆ. ಆದರೆ ಇಲ್ಲಿ ನಡೆದಷ್ಟು ನಿರ್ದಾಕ್ಷಿಣ್ಯವಾಗಿ ಮತ್ತು ವ್ಯಾಪಕವಾಗಿ ಬೇರೆ ಯಾವ ದೇಶದಲ್ಲೂ ನಡೆದಿಲ್ಲ.

ಭಾರತದಲ್ಲಿ ಒಟ್ಟು ಆರು ತತ್ವ ಚಿಂತನೆಯ ಮಾರ್ಗಗಳಿವೆ ಎಂಬ ತಪ್ಪುಗ್ರಹಿಕೆಯ ಸಾಮಾನ್ಯ ಅಭಿಪ್ರಾಯವಿದೆ. ಈ ಅಭಿಪ್ರಾಯವು ಮ್ಯಾಕ್ಸ್‌ಮುಲರ್‌ನ 'The six systems of Indian Philosophy' ಎನ್ನುವ ಗ್ರಂಥದಿಂದ ಇನ್ನೂ ಪ್ರಭಲವಾಗಿ ಬೆಳೆಯಲು ಕಾರಣವಾಯಿತು. ಇದರಂತೆ ವೇದಾಂತ ಅಥವಾ ಉತ್ತರ ಮಿಮಾಂಸೆ, ಪೂರ್ವ ಮಿಮಾಂಸೆ, ಸಾಂಖ್ಯ, ಯೋಗ, ನ್ಯಾಯ ಮತ್ತು ವೈಶೇಷಿಕ-ಇವು ಆರು ಪ್ರಕಾರಗಳು. ವಾಸ್ತವವಾಗಿ ನೋಡಿದರೆ ಈ ಆರರಲ್ಲಿ ಪೂರ್ವಮೀಮಾಂಸೆಯು ಬ್ರಾಹ್ಮಣಗಳ ಕರ್ಮಕಾಂಡ (ವಿಧಿಕ್ರಿಯೆ)ಗಳ ಪ್ರತಿಪಾದನೆಯಾಗಿದೆ. ಮತ್ತೊಂದು ರೀತಿಯಲ್ಲಿ ಹೇಳಬೇಕಾದರೆ, ಪೂರ್ವಮಿಮಾಂಸೆಯು ಅಗ್ರಗಣ್ಯ ಪುರೋಹಿತನಾದ ಜೈಮಿನಿಯು ಪೌರೋಹಿತ್ಯವನ್ನು ಕಲಿಯುವವರಿಗಾಗಿ ಕೈಪಿಡಿ ಇದೆನ್ನಬಹುದು. ಜೈಮಿನಿಯ ಪೂರ್ವಮಿಮಾಂಸೆಯಲ್ಲಿ 'ತತ್ವ ವಿವೇಚನೆಗೆ ಅವಕಾಶವೇ ಇಲ್ಲ' ಎನ್ನುವ ಮಾತನು ಮ್ಯಾಕ್ಸ್‌ಮುಲರ್‌ನೇ ಒಪ್ಪಿಕೊಳ್ಳುತ್ತಾನೆ. ಈ ಅಂಶವನ್ನು ಕುರಿತು ಪಾಲ್‌ದೂಸೆ ಮತ್ತು ಗಾರ್ಬ್ ಅವರುಗಳು ಇನ್ನೂ ಹೆಚ್ಚು ನಿಖರವಾದ ಇಂತಹುದೇ ಅಭಿಪ್ರಾಯವನ್ನು ತಳೆಯುತ್ತಾರೆ.

ಜೈಮಿನಿಯ ಪೂರ್ವಮಿಮಾಂಸೆಯು ಪುರೋಹಿತರ ಕೈಪಿಡಿಯಾದರೆ ಪತಂಜಲಿಯ ಯೋಗವು ಮನೋ-ದೈಹಿಕ ಅನುಭವಗಳಿಗೆ ಹಾತೊರೆಯುವವರ ದಿಗ್ದರ್ಶಿಕೆ. ಯೋಗವು ಈಗ ಅಂತರರಾಷ್ಟ್ರೀಯ ಖ್ಯಾತಿಯನ್ನು ಗಳಿಸುತ್ತದೆ ಎಂಬುದು ನನಗೆ ತಿಳಿದಿದೆ.

ಅಷ್ಟೇ ಅಲ್ಲ 'ವಿಮಾನವೇಗ'ದ ಯೋಗಗುರುಗಳಿಂದ ಭಾರಿಪ್ರಮಾಣದ ಯೋಗಶಾಲೆಗಳು ಭಾರತದಲ್ಲೂ ಹೊರದೇಶಗಳಲ್ಲೂ ಹೆಚ್ಚು ಹೆಚ್ಚು ಸ್ಥಾಪಿತವಾಗುತ್ತಿವೆ. ಸಧ್ಯದಲ್ಲಂತೂ, ಆಧುನಿಕ ಮನುಷ್ಯನ ಎಲ್ಲ ಬಗೆಯ ವ್ಯಾಕುಲತೆಗಳಿಗೂ ಯೋಗವೊಂದೆ ಉತ್ತರ ಎನ್ನುವ ರೀತಿಯಲ್ಲಿ 'ಭಾರೀ ಉದ್ಯೋಗವಾಗಿರುವುದು' ನಿಜ. ಆದರೆ ಯೋಗ ತತ್ವದ ಗುಣ ಇದೆಯೆ ? ಎನ್ನುವ ಪ್ರಶ್ನೆಯನ್ನು ಎತ್ತಿದವರು ಪ್ರಾಚೀನ ಭಾರತದಲ್ಲಿಯೇ ಕಂಡುಬರುತ್ತಾರೆ. ಮೀಮಾಂಸ ತತ್ವದ ಪ್ರತಿಪಾದಕರಲ್ಲಿ ಪ್ರಮುಖವಾದ ಕುಮಾರಿಲ ಭಟ್ಟನ ಪ್ರಕಾರ ಯೋಗಾನುಭವವು "ಕೇವಲ

ಮಾನಸಿಕ ಕಲ್ಪನೆ. ಆದ್ದರಿಂದ ಇನ್ನಿತರ ಮಾನಸಿಕ ಕಲ್ಪನೆಗಳಿಗಿಂತ ಇದು ಯಾವ ರೀತಿಯಲ್ಲೂ ಭಿನ್ನವಿಲ್ಲ". ಯೋಗವನ್ನು ತತ್ವದರ್ಶನ ಎಂದು ನಿಸ್ಸಂದೇಹವಾಗಿ ಕರೆಯಲು ಮ್ಯಾಕ್ಸ್‌ಮುಲರ್ ಹಿಂದೆಮುಂದೆ ನೋಡುತ್ತಾನೆ. ಅವನ "ಭಾರತೀಯ ತತ್ವಶಾಸ್ತ್ರದ ಆರು ಶಾಖೆಗಳು" ಎನ್ನುವ ಕೃತಿಯಲ್ಲಿ ಒಂದು ಕಡೆ ಹೀಗೆ ಹೇಳುತ್ತಾನೆ. ಬ್ರಾಹ್ಮಣಗಳು ಹೇಳುವಂತೆ, ಯೋಗವು ಸಾಂಖ್ಯದ ಬದಲಾದ ರೂಪವಷ್ಟೆ. ಇದು ಮನಸ್ಸಿನ ಏಕಾಗ್ರತೆಯನ್ನು ಗಳಿಸುವ ಸಲುವಾಗಿ ಒಂದುರೀತಿಯ ಸಮಾನ ಶಿಸ್ತನ್ನು ಕ್ರಮಬದ್ಧಗೊಳಿಸುವ ಪ್ರಯತ್ನವಾಗಿದೆ. ಭಗವಂತನಲ್ಲಿನ ಭಕ್ತಿಯು ಈ ಶಿಸ್ತಿನ ಒಂದು ಭಾಗವಾಗಿದೆ. ಪತಂಜಲಿಯ ವ್ಯಕ್ತಿತ್ವದ ಬಗೆಗಾಗಲಿ ಅಥವಾ ಆಸ್ತಿಕವಾದೀ ಸಾಂಖ್ಯ ತತ್ವವನ್ನು ಅವನು ಪ್ರತಿಪಾದಿಸಿದ ಸನ್ನಿವೇಶದ ಬಗೆಗಾಗಲಿ ಪೂರ್ಣ ವಿವರಗಳು ಗೊತ್ತಿಲ್ಲದೆ ಸಾಮಾನ್ಯವಾಗಿ ತಿಳಿದಿರುವಂತೆ ಈ ಪ್ರಯತ್ನವು ಧಾರ್ಮಿಕ ಸ್ವತಂತ್ರದ ಉದ್ದೇಶ್ಯವನ್ನು ಹೊಂದಿತ್ತೇ? ಎನ್ನುವ ಪ್ರಶ್ನೆಗೆ ನಾವು ಉತ್ತರವನ್ನು ಕೊಡುವುದು ಸಾಧ್ಯವಿಲ್ಲ". ರಾಧಾಕೃಷ್ಣನ್‌ರ ಪ್ರಕಾರ, ಯೋಗಶಾಸ್ತ್ರದ ಬಗ್ಗೆ ಪತಂಜಲಿಯು ಹೊಂದಿದ್ದ ಅಭಿಪ್ರಾಯವನ್ನು ಹೇಳುವುದರಲ್ಲೇ ತೃಪ್ತಿಪಡುತ್ತಾರೆ. "ಪತಂಜಲಿಯ ಪ್ರಕಾರ ಯೋಗವೆಂದರೆ ಭೌತಿಕವೂ ಮಾನಸಿಕವೂ ಆದ ಮಾನವ ಸ್ವಭಾವದ ಹಲವಾರು ಗುಣಗಳನ್ನು ನಿಗ್ರಹಿಸುವ ಮೂಲಕ ಪರಿಪೂರ್ಣತೆಯನ್ನು ಸಾಧಿಸುವ ಶಿಸ್ತುಬದ್ಧ ಪ್ರಯತ್ನ. ಪತಂಜಲಿಯು ದೇಹವನ್ನು ಆದರ ಅಶಾಂತತೆಯಿಂದ ಮುಕ್ತಗೊಳಿಸಲು ಮತ್ತು ಆದರ ಕಲ್ಮಶಗಳಿಂದ ಬಿಡುಗಡೆಗೊಳಿಸಲು ಕೆಲವು ಅಭ್ಯಾಸಗಳನ್ನು ಸೂಚಿಸುತ್ತಾನೆ. ಈ ವಿಧಾನಗಳಿಂದ ಪಡೆಯುವ ಶಕ್ತಿಯನ್ನು ತೊಡಗಿಸಿ ಪರಮಾವಧಿಯ ಯೌವ್ವನವನ್ನು ಮತ್ತು ದೀರ್ಘಾಯುಸ್ಸನ್ನು ಪಡೆಯಬಹುದು ಮತ್ತು ಅವನ್ನು ಆಧ್ಯಾತ್ಮಿಕ ಬಿಡುಗಡೆಯ ಆಸಕ್ತಿಗಳಲ್ಲಿ ತೊಡಗಿಸಬೇಕು."

ಯೋಗವನ್ನು ಆಧ್ಯಾತ್ಮಿಕ ಬಿಡುಗಡೆಯ ಆಸಕ್ತಿಯಲ್ಲಿ ತೊಡಗಿಸಬಹುದೋ ಇಲ್ಲವೋ ಒಂದಂತೂ ನಿಶ್ಚಿತ. ಪತಂಜಲಿಯೇ ಸ್ಪಷ್ಟಪಡಿಸಿದಂತೆ ಚಿತ್ತವನ್ನು ಅಚಲಗೊಳಿಸಿರುವುದು ಯೋಗಸೂತ್ರ. "ಮ[illegible] ವಿಚಾರಪರ ಸ್ವಭಾವವನ್ನು ಕೊಂದುಹಾ[illegible] ಯೋಗದ ಉದ್ದೇಶ" ಎನ್ನುತ್ತಿದ್ದರು [illegible] ಮೂರ್ತಿ.

ಮನಸ್ಸನ್ನು ಅಚಲಗೊಳಿಸುವುದು ಮತ್ತು ವಿ[illegible]ಗಳನ್ನು ನಾಶಪಡಿಸುವುದು ವಿಕಾಸವಾದದ ಏಣಿಯನ್ನು ಏರುವುದಾಗಿರದೆ ಹಲವಾರು ಕಾಲು ಇಳಿಯುವುದಾಗಿದೆ. ಮಾನವನಾಗಿ ಬದುಕುವ ವಿಶೇಷ ಹಕ್ಕನ್ನೇ ಅದು ಬಲಿತೆಗೆದುಕೊಳ್ಳುತ್ತದೆ. ಗ್ರೀಕ್ ನಾಟಕಕಾರ ಸಪೋಕ್ಲಿಸ್ ಹೇಳುವಂತೆ ವೈಚಿತ್ರ್ಯಗಳು ಹಲವು/ಎಲ್ಲದಕು ವಿಚಿತ್ರ ಮಾನವ ಕುಲವು.

ಮನುಷ್ಯನನ್ನು ವಿಚಿತ್ರ ಎಂಬಂತೆ ಮಾಡುವುದೆಂದರೆ ಅವನ ಮನಸ್ಸು. ಗಿಲ್ಬರ್ಟ್‌ಹಿಗೆಟ್‌ನ ಮಾತುಗಳಲ್ಲಿ "ನಾವು [Homo Sapiens] ಬುದ್ಧಿಜೀವಿ ಮಾನವರು". ನಮ್ಮನ್ನು ಇತರ ಎಲ್ಲ ಪ್ರಾಣಿಗಳಿಂದ ಬೇರೆಯಾಗಿಸಿರುವುದು ಚಿಂತನೆಯ ಗುಣ. ಅದರಲ್ಲೂ ಮುಖ್ಯವಾಗಿ ಪರಿಕಲ್ಪನೆಗಳ ಚಿಂತನೆ. ಮಾನವನ ಚರಿತ್ರೆ ಎಂದರೆ ಮನಸ್ಸಿನ ಚರಿತ್ರೆ; ಅವನ ಚಿಂತನೆಗಳ ಚರಿತ್ರೆ ಎನ್ನುತ್ತಾ ಹಿಗೆಟ್ ಮುಂದುವರೆದು ಹೀಗೆ ಹೇಳುತ್ತಾನೆ: "ಅಧಿಕಾರಕ್ಕಾಗಿ ನಡೆದ ಹೋರಾಟಗಳ ದಾಖಲೆಯಾದ ಚರಿತ್ರೆಯು ಅಭ್ಯಾಸವು ಕುತೂಹಲಕಾರಿಯಾದರೂ ಪ್ರತಿಫಲವಿಲ್ಲದ್ದು. ಹಲವಾರು ವರ್ಷಗಳವರೆಗೆ ಡೈನೋಸಾರಸ್‌ಗಳು ಪರಸ್ಪರ ಮಾರಕವಾಗಿ ಕಿತ್ತಾಡಿದ್ದು ಕೆಲವು ಉಳಿದವು.

> **ಮನುಸ್ಸನ್ನು ಅಚಲಗೊಳಿಸುವುದು ಮತ್ತು ವಿಚಾರಗಳನ್ನು ನಾಶಪಡಿಸುವುದು ವಿಕಾಸವಾದದ ಏಣಿಯನ್ನು ಏರುವುದಾಗಿರದೆ ಹಲವಾರು ಕಾಲು ಇಳಿಯುವುದಾಗಿದೆ. ಮಾನವನಾಗಿ ಬದುಕುವ ವಿಶೇಷ ಹಕ್ಕನ್ನೇ ಅದು ಬಲಿತೆಗೆದುಕೊಳ್ಳುತ್ತದೆ.**

ಕೆಲವು ಸತ್ತವು. ಇದೆಲ್ಲ ಅರ್ಥಹೀನ. ಮಾನವ ಬು[illegible] ಕಟ್ಟುಗಳು ಹಲವಾರು ಶತಮಾನಗಳವರೆಗೆ ಒಂದನ್ನೊಂದು ಬೇಟೆಯಾಡಿವೆ, ಕಾದಾಡಿವೆ, ಗುಲಾಮರನ್ನಾಗಿ ಮಾಡಿವೆ. ದೇಹಬಲವೂ ಆಕ್ರಮಣಕಾರಿ ವಿಧಾನ ತಳೆದಿದ್ದವರೂ ಒಂದೆಡೆಯಾದರೆ ಅವಕಾಶ ನೋಡಿ ಮೇಲೆ ಬೀಳಲು ಹೊಂಚುಹಾಕಿದವರು ಇನ್ನೊಂದೆಡೆ; ಇದು ನಿಸ್ಸತ್ವ ಸಂಗತಿ. ಆದರೆ ಈಗ ಇದು ಮಾನ್ಯವೇ [illegible]
ಈ ಗ್ರಹದ ಮೇಲೆ ಹರಡಿಕೊಂಡ ಮಾನವನನ್ನು ವಿವರಿಸಲು ಈ ಇತಿಹಾಸಕ್ಕೆ ಸಾಧ್ಯವೇ ? ಅಥವಾ ಇದು ಕೇವಲ ಅವನ ಚಟುವಟಿಕೆಗಳ ಒಂದು ಭಾಗವೇ? ನಮ್ಮ ಜ್ಞಾನ ಮತ್ತು ಚಿಂತನೆಗಳ ಕಥೆಯೇ ನಿಜವಾದ ಚರಿತ್ರೆ. ಜ್ಞಾನಾರ್ಜನೆಯಿಂದ ಮಾತ್ರವೇ ನಾವು ಪ್ರಾಣಿಗಳಿಗಿಂತ ಭಿನ್ನವಾಗಿ ನಮ್ಮನ್ನು ನಾವು ಮನುಷ್ಯರನ್ನಾಗಿ ಮಾಡಿಕೊಂಡಿದ್ದೇವೆ. ಇದು ಮೊದಲ ಹಂತ. ಇದಕ್ಕಿಂತ ಹಿಂದೆ ದಟ್ಟವಾದ ಅರಣ್ಯಗಳ ನಡುವೆ ಹೇಗೋ ಜೀವಕೋಶಗಳು ದ್ವಿಗುಣಿಸಿ ಪ್ರತಿಕ್ರಿಯೆಗಳುಂಟಾಗಿ ಆಶ್ಚರ್ಯಕರವಾದ ಮಾನವನ ಮಿದುಳು ರೂಪುಗೊಂಡಿತು. ಅದರೊಂದಿಗೆ ಇನ್ನಿತರ ಎರಡು ಮಾನವ ಶಕ್ತಿಗಳಾದ-ಆಶ್ಚರ್ಯಕರವೂ ಸೂಕ್ಷ್ಮವೇದಿಕೆಯೂ ಆದ ಮಾತೂ; ಮತ್ತು ಪ್ರಪಂಚವು ನಾಶವಾದರೂ ಅದನ್ನು ಪುನರ್ ನಿರ್ಮಾಣಮಾಡುವ ತಂತ್ರ ಹಾಗೂ ಯಾವುದೇ ಕಾರ್ಯಕ್ಕೆ ಬಳಗಿಸಿಕೊಳ್ಳಬಹುದಾದ, ಕುಶಲತೆಯುಳ್ಳ ಕೈಗಳು ರೂಪುಗೊಂಡವು". ಯೋಗಾಭ್ಯಾಸ ಮತ್ತು ಚಿಂತನೆಯನ್ನು ನಿರ್ನಾಮಮಾಡುವುದರ ಮೂಲಕ ಮುಕ್ತಿಯನ್ನು ಬಯಸುವುದು ತಿಳಿಗೇಡಿತನವೇ ಸರಿ.

ಈಗ ಭಾರತೀಯ ತತ್ವಶಾಸ್ತ್ರಗಳತ್ತ ತಿರುಗೋಣ. ಮ್ಯಾಕ್ಸ್‌ಮುಲರ್‌ನ ಪಟ್ಟಿಯಿಂದ ಪೂರ್ವಮೀಮಾಂಸೆ ಮತ್ತು ಯೋಗಗಳನ್ನು ಹೊರತುಪಡಿಸಿದರೆ, ವೇದಾಂತ, ಸಾಂಖ್ಯ, ನ್ಯಾಯ ಮತ್ತು ವೈಶೇಷಿಕಗಳು ಉಳಿಯುತ್ತವೆ. ಇವುಗಳಲ್ಲಿ ವೇದಾಂತವು ಉಗ್ರ ಆದರ್ಶವಾದಿಯಾದರೆ ಮಿಕ್ಕವು ಭೌತವಾದದತ್ತ ವಾಲುವಂತಹವು. ಹಾಗೇ ನೋಡಿದರೆ ಈ ಮೂರೂ ತತ್ವಪ್ರಕಾರಗಳು ದೈವದ ನಿರಾಕರಣೆಯ ಜೊತೆಗೆ ವೇದಗಳ ಪ್ರಶ್ನಾತೀತ ಅಧಿಕಾರವನ್ನು ವಿರೋಧಿಸುತ್ತಲೇ ಪ್ರಾರಂಭವಾದವು. ಅಲ್ಲದೆ ಇವು ಸೃಷ್ಟಿಗೆ ಭೌತವಾದೀ ನೆಲೆಯನ್ನು ಒಪ್ಪಿಕೊಂಡತಹವು. ಆದರೆ [illegible] ಭಯದಿಂದ ರಾಜಿಮಾಡಿ[illegible]ಕೊಂಡು ಆ ಭೌತವಾದಿಯಾಗಿ ಮಾತ್ರವಲ್ಲದೆ ಆಸ್ತಿಕವಾದಿಯಾಗಿ ಕೂಡ ಬೆಳೆಯುವುದು ಅನಿವಾರ್ಯವಾಯಿತು.

(ಮುಂದುವರೆಯುವುದು)


## ಗ್ರಂಥ ಋಣ

ಉಪನ್ಯಾಸ : ಒಂದು

[illegible] ಚಿಕ್ಕರ್ ಎಸ್. ಆರ್. (ಸಂಗ್ರಹ) : ಎಪಿಗ್ರಾಂಶ್ [illegible] 1971 ಪು. 141
[illegible] ರೀ, ಡೇಲ್ : ದಿ ನ್ಯಾಚುರ[illegible] ದೆಹಲಿ, 19[illegible] ಪು. 30
4. [illegible]ಂಟ್, ವಿಲ್ : ದಿ ಸ್ಟೋರಿ ಆಫ್ ಫಿ[illegible] [illegible]48, 22
5. ಮುಲರ್, ಮ್ಯಾಕ್ಸ್ : ದಿ ಸಿಕ್ಸ್ ಸಿಸ್ಟಮ್ಸ್ ಆ[illegible] ಲಂಡನ್, 191[illegible]
6. ಅದೇ, ಪು.199
7. ಕೆ.ಎಸ್. ಮೂರ್ತಿ ಅವರಿಂದ ಉದಹೃತ : ಎವಲ್ಯೂಷನ್ ಆ[illegible] ವಾಲ್ಟೇರ್, 1[illegible] ಪು. 42
8. ಚಟ್ಟೋಪಾಧ್ಯಾಯ, ದೇವಿಪ್ರಸಾದ : ಟ್ರೆಂಡ್ಸ್ ಇನ್ ಇಂಡಿಯನ್ [illegible] ಮೈಸೂರು, 1976, ಪು. 29
9. ಮುಲರ್ ಮ್ಯಾಕ್ಸ್ : 1919, ಪು. 318
10. ರಾಧಾಕೃಷ್ಣನ್ ಎಸ್. ಇಂಡಿಯನ್ ಫಿಲಾಸಫಿ, ಸಂ[illegible] 1948, ಪು. 338
11. ಹಿಗೆಟ್, ಗಿಲ್ಬರ್ಟ್ : ದಿ ಮೈಂಡ್ ಆಫ್ ಮ್ಯಾನ್ [illegible], ಪು. 7-8


ಸಂಪಾದಕ/ಪ್ರಕಾಶಕ/ಮುದ್ರಕ: ರಂಗಸ್ವಾಮಿ ಬೆಲ್ಲದಮಡು, 2B, ಮಹದೇಶ್ವರ ನಿಲಯ, 2ನೇ ಕ್ರಾಸ್, 2ನೇ ಮೈನ್, ಎ.ಕೆ. ಕಾಲನಿ, ಹೊಸಳ್ಳಿ, ಬೆಂಗಳೂರು-40
ಮುದ್ರಣ: ವೃದ್ಧಿ ಪ್ರಕಾಶನ ಲಿಮಿಟೆಡ್, ವಿಜಯನಗರ, ಬೆಂಗಳೂರು-40